# श्रीलक्ष्मीनारायणार्यसम्पुटम्

श्रीराघवेन्द्रगुरुसार्वभौमानां पूर्वाश्रमतनयमणिभिः विरचिताः

## ऋग्भाष्यटीकाटिप्पणी
## श्रीरामचारित्रमञ्जरीव्याख्या
## श्रीकृष्णचारित्रमञ्जरीव्याख्या
## श्रीमन्महाभारततात्पर्यनिर्णयभावसङ्ग्रहव्याख्या


सम्पादकाः

विद्वान् राजा एस्. पवमानाचार्यः, श्रीपादपौत्रः






प्रकाशकः

**जगद्गुरु श्रीमन्मध्वाचार्यमूलमहासंस्थानम्**

श्रीराघवेन्द्रस्वामिमठः, मन्त्रालयः

।। श्रीमन्मूलरामो विजयते ।। ।। श्री गुरुराजो विजयते ।।

# श्रीलक्ष्मीनारायणार्यसम्पुटम्

श्रीराघवेन्द्रगुरुसार्वभौमानां पूर्वाश्रमतनयमणिभिः विरचिताः

## ऋग्भाष्यटीकाटिप्पणी

## श्रीरामचारित्रमञ्जरीव्याख्या

## श्रीकृष्णचारित्रमञ्जरीव्याख्या

## श्रीमन्महाभारततात्पर्यनिर्णयभावसङ्ग्रहव्याख्या


*सम्पादकाः*

विद्वान् राजा एस्. पवमानाचार्यः, श्रीपादपौत्रः

विद्वान् कडपा राघवेन्द्राचार्यः

विद्वान् पुराणिक सुब्रह्मण्याचार्यः

विद्वान् यन्. वादिराजाचार्यः



*प्रकाशकः*

जगद्गुरु श्रीमन्मध्वाचार्यमूलमहासंस्थानम्

श्रीराघवेन्द्रस्वामिमठः, मन्त्रालयः

# Śrī Lakshmīnārāyaṇārya Saṁpuṭam

Ṛgbhāshya Tīkā Tippaṇī

Śrī Pāma Cāritra Mañjarī Vyākhyā

Śrī Kṛṣṇa Cāritra Mañjarī Vyākhyā

Śrīman Mahābhārata Tātparya Nirṇaya-
-Bhāva Saṅgraha Vyākhyā

*Pages* : 548

*Price* : Rs.

*Hon. Editor* :

Śrī Rājā S. Rājagopālāchārya

*Editors* :

Vidwān Rājā S. Pavamānāchārya, Śrīpadapautra
Vidwān Kaḍapā Rāghavendrāchārya
Vidwān Purāṇik Subrahmaṇyāchārya
Vidwān N. Vādirājāchārya

*Published By* :

**Śrī Rāghavendra Swāmy Mutt**
Mantrālayam, Dist. Kurnool, A.P.

*Printed by* :
**Dhananjay Warkhedkar**
at : **Sudhā Mudraṇa**
Basavanagudi, Bangalore - 560 004.
☎ Off : 6560 2836 Resi : 2672 3107

॥ ಶ್ರೀಮನ್ಮೂಲರಾಮೋವಿಜಯತೇ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ

ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ

ಶ್ರೀಮನ್ಮೂಲರಘುಪತಿವೇದವ್ಯಾಸದೇವದಿವ್ಯಶ್ರೀಪಾದಪದ್ಮಾರಾಧಕ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ

- **ಶ್ರೀರಾಘವೇಂದ್ರಸ್ವಾಮಿಗಳವರ ಮಠದ**

ವೇದಾಂತಸಾಮ್ರಾಜ್ಯದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ

ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ

**ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ**

ವರಕುಮಾರಕರಾದ

# ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹವಚನ



"ವೇದೋಽಖಿಲೋ ಧರ್ಮಮೂಲಂ" ಎಂಬ ಪ್ರಮಾಣಾನುಸಾರ ಧರ್ಮ-ಗಳಿಗೆ ವೇದವು ಮೂಲವೆನಿಸಿದೆ. ಅಪೌರುಷೇಯವಾದ ವೇದವು ಭಗವಂತನನ್ನು

ತಿಳಿಸಿಕೊಡುವ ಒಂದು ಮುಖ್ಯ ಮಾಧ್ಯಮವಾಗಿದೆ. ಅಷ್ಟೇ ಅಲ್ಲದೆ, "ವೇದಾಕ್ಷರಾಣಿ ಯಾವಂತಿ । ಕಥಿತಾನಿ ದ್ವಿಜಾತಿಭಿಃ । ತಾವಂತಿ ಹರಿನಾಮಾನಿ । ಕೀರ್ತಿತಾನಿ ನ ಸಂಶಯಃ" ಎಂಬ ಪ್ರಮಾಣಾನುಸಾರ ವೇದರಾಶಿಯಲ್ಲಿರುವ ಪ್ರತಿಯೊಂದು ಅಕ್ಷರವೂ ಭಗವದ್ವಾಚಕಗಳಾಗಿವೆಯಾದ್ದರಿಂದ "ಪರವಿದ್ಯೆ" ಎಂದು ಪ್ರಸಿದ್ಧವಾಗಿದೆ. ಇಂತಹ ವೇದಗಳ ಅಧ್ಯಯನ, ಅಧ್ಯಾಪನಗಳು ಅವಶ್ಯ ಮಾಡಲೇಬೇಕು. ಕೇವಲ ಮೂಲಪಾಠದ ಅಧ್ಯಯನ ಮಾತ್ರವಲ್ಲದೆ, ಅರ್ಥಾನು-ಸಂಧಾನಪೂರ್ವಕವಾಗಿ ಅಧ್ಯಯನ ಮಾಡಬೇಕು. ಈ ನಿಟ್ಟಿನಲ್ಲಿ ಋಗ್ಯಜು-ಸ್ಸಾಮಾಥರ್ವವೆಂದು ಪ್ರಸಿದ್ಧವಾದ ನಾಲ್ಕು ವೇದಗಳಲ್ಲಿ ಒಂದಾದ ಋಗ್ವೇದವು ನಲವತ್ತು ಸೂಕ್ತಗಳಿಗೆ ನಮ್ಮ ಪೂರ್ವಾಚಾರ್ಯರಾದ ಹಂಸನಾಮಕ ಪರಮಾತ್ಮನ ಪರಂಪರೆಯಲ್ಲಿ ಬಂದ ಶ್ರೀಮಧ್ವಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಆ ಭಾಷ್ಯಕ್ಕೆ ಅದೇ ನಮ್ಮ ಶ್ರೀಮಠದ ಪರಂಪರೆಯಲ್ಲಿ ಬಂದ ಟೀಕಾಕೃತ್ಪಾದರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರು ಟೀಕೆಯನ್ನು ಬರೆದಿದ್ದಾರೆ. ಆ ಟೀಕೆಗೆ ಜಗನ್ಮಾನ್ಯರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರ ಪೂರ್ವಾಶ್ರಮದ ಪುತ್ರರಾದ ಲಕ್ಷ್ಮೀ-ನಾರಾಯಣಾಚಾರ್ಯರು ಉತ್ತಮವಾದ ಟಿಪ್ಪಣಿಯನ್ನು ಬರೆದಿರುತ್ತಾರೆ. ಈ ಟಿಪ್ಪಣಿಯು ಇದುವರೆಗೆ ಉಪಲಬ್ಧವಾಗಿರಲಿಲ್ಲ. ಇದನ್ನು ಇದಂ ಪ್ರಥಮತಯಾ ಮುದ್ರಿಸಿ ಎಲ್ಲರಿಗೂ ಒದಗುವಂತೆ ಮಾಡಲು ನಾವು ನಿರ್ಧರಿಸಿದೆವು. ನಮ್ಮ ಆಜ್ಞೆಯಂತೆ ನಮ್ಮ ಶ್ರೀಮಠದ ವಿದ್ವಾಂಸರಾದ ರಾಜಾ ಪವಮಾನಾಚಾರ್ಯ, ಕಡಪ ರಾಘವೇಂದ್ರಾಚಾರ್ಯ, ಪುರಾಣಿಕ ಸುಬ್ರಹ್ಮಣ್ಯಾಚಾರ್ಯ, ಎನ್. ವಾದಿ-ರಾಜಾಚಾರ್ಯರು ಅತ್ಯಂತ ಆಸಕ್ತಿಯಿಂದ ಅನೇಕ ಹಸ್ತಪ್ರತಿಗಳನ್ನು ಶೋಧಿಸಿ ಸಂಪಾದಿಸಿದ್ದಾರೆ. ಇವರೆಲ್ಲರಿಗೂ ಹಾಗೂ ಅಧ್ಯಯನಾಧ್ಯಾಪನಾದಿಗಳನ್ನು ಮಾಡುವ ಸಕಲರಿಗೂ ಸನ್ಮಂಗಳವನ್ನುಂಟುಮಾಡಲೆಂದು ಅಸ್ಮದುಪಾಸ್ಯ ಶ್ರೀ ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮೂಲರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರು

ಇತಿ ನಾರಾಯಣಸ್ಮರಣೆಗಳು

॥ ಶ್ರೀಃ ॥

# ಪ್ರಕಾಶಕರ ಮಾತು

**"ಸುಖಂ ಮೇ ಸ್ಯಾತ್, ದುಃಖಂ ಮನಾಗಪಿ ಮಾ ಭೂತ್"** – "ನನಗೆ ಸರ್ವದಾ ಸುಖವೇ ಆಗಲಿ, ದುಃಖವು ಕಿಂಚಿತ್ತೂ ಆಗಬಾರದು" ಎಂಬಂತೆ ಮೋಕ್ಷದ ಅಪೇಕ್ಷೆಯನ್ನು ಎಲ್ಲ ಜೀವಿಗಳೂ ಬಯಸುತ್ತಾರೆ. ಈ ಪ್ರಕಾರದ ಮೋಕ್ಷವನ್ನು ಬಯಸುವವರು ಎಲ್ಲ ವಿಧದಿಂದ ಭಗವಂತನನ್ನು ಆರಾಧಿಸಬೇಕು.

**"ಆತ್ಮಾ ವಾಽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಶ್ಚ"** – "ಭಗವಂತನ ದರ್ಶನ ಮಾಡಬೇಕು, ಅವನ ಗುಣಗಾನ ಶ್ರವಣ ಮಾಡಬೇಕು, ಅವನ ಬಗ್ಗೆ ಚಿಂತನೆ ಮಾಡಬೇಕು, ಸದಾಕಾಲ ಅವನ ಧ್ಯಾನ ಮಾಡಬೇಕು.

ಇದೆಲ್ಲ ಸಾಧ್ಯವಾಗಬೇಕಾದರೆ ಭಗವಂತನ ಬಗ್ಗೆ ತಿಳಿಯಲು ಏಕೈಕ ಮಾರ್ಗ ಎಂದರೆ ನಮ್ಮ ಗುರುಗಳು ಕರುಣಿಸಿದ ಅಪಾರ ಗ್ರಂಥರಾಶಿಗಳ ಅಧ್ಯಯನ. ಅಂತಹ ಗ್ರಂಥಗಳ ಮುದ್ರಣ, ಪ್ರಕಾಶನ ನಮ್ಮ ವಿದ್ಯಾಮಠವೆಂದೇ ಪ್ರಸಿದ್ಧವಾದ ಶ್ರೀರಾಘವೆಂದ್ರಮಠದಿಂದ ನಿರಂತರವಾಗಿ ನಡೆಯುತ್ತಲೇ ಇದೆ. ಇದೇ ಸರಣಿಯಲ್ಲಿ ಈಗ ಶ್ರೀಜಯತೀರ್ಥರ ಖಂಡನತ್ರಯಟೀಕೆಗೆ ಶ್ರೀರಾಘವೇಂದ್ರತೀರ್ಥಸ್ವಾಮಿಗಳವರ ಪೂರ್ವಾಶ್ರಮದ ಸುಪುತ್ರರಾದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ಬರೆದ ಟಿಪ್ಪಣಿಯ ಪ್ರಪ್ರಥಮ ಮುದ್ರಣ ಮತ್ತು ಪ್ರಕಾಶನ ಶ್ರೀಮಠದ ಪೀಠಾಧಿಪತಿಗಳಾದ ಶ್ರೀಸುಶಮೀಂದ್ರತೀರ್ಥ ಶ್ರೀಪಾದಂಗಳವರ ಆಜ್ಞೆಯಂತೆ ಮಾಡಲು ಅಪಾರ ಹರ್ಷವಾಗುತ್ತಿದೆ.

ಈ ಗ್ರಂಥ ಪ್ರಕಾಶನಕ್ಕೆ ನಮ್ಮವರೇ ಆದ ವಿದ್ವಾನ್ ರಾಜಾ ಎಸ್. ಪವಮಾನಾಚಾರ್ಯರು ವಿಶೇಷ ಪರಿಶ್ರಮದಿಂದ ಗ್ರಂಥವನ್ನು ಸಂಶೋಧನೆ, ಸಂಪಾದನೆ ಮಾಡಿ ನಮ್ಮ ವಿದ್ಯಾಪೀಠದ ಅಧ್ಯಾಪಕರುಗಳಾದ ವಿದ್ವಾನ್ ಕಡಪ ರಾಘವೇಂದ್ರಾಚಾರ್ಯ, ಪುರಾಣಿಕ ಸುಬ್ರಹ್ಮಣ್ಯಾಚಾರ್ಯ, ಎಸ್. ವಾದಿರಾಜಾಚಾರ್ಯ ಅವರ ಸಹಸಂಪಾದಕತ್ವದಲ್ಲಿ ಪ್ರಕಾಶನಕ್ಕಾಗಿ ಒಪ್ಪಿಸಿದ್ದಾರೆ. ಅವರಿಗೆ ನಮ್ಮ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮೂಲರಾಮದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

विशिष्टार्थं विरचय्य, श्रीसुमतीन्द्रतीर्थाः "भावरत्नकोशा"भिधां ऋग्भाष्यटीका-टिप्पणीं रचयामासुः । श्रीभुवनेन्द्रतीर्थाः ऋग्भाष्यस्य ऋते चत्वारिंशत् सूक्तानि समग्रस्य ऋग्वेदस्य व्याख्यानं व्यदध्युरिति प्रथा वर्तते । श्रीमद्राघवेन्द्रतीर्थानां पूर्वाश्रमपुत्राः श्रीलक्ष्मीनारायणाचार्याः "ऋग्भाष्यटीकाटिप्पणीनाम्नीं" विस्तृता-मुत्तमां प्रौढां व्याख्यां व्यरचयन् ।

अधुना, तद्व्याख्यानयुता, ऋग्भाष्यटीका अस्मद्राघवेन्द्रमठेन मुद्राप्य प्रकशयिष्यत इति महान् प्रमोदः । तथा च, श्रीहंसनामकपरमात्मनः साक्षात्पर-म्परायां, उपरिनिर्दिष्टाः श्रीराघवेन्द्रमठीयाः श्रीपीठाधिपतयः तथा श्रीलक्ष्मी-नारायणाचार्याश्च वेदव्याख्यानेन, वेदव्याख्यानस्य वेदसंरक्षणस्य वेदधर्मप्रचारस्य च श्रीमठः जन्मभूमिरिति वक्तुं शक्नुमः ।

ग्रन्थस्यास्य पठनपाठनपारायणप्रवचनादिभिः सदुपयुक्ततां लभता-मित्याशास्महे । सत्कृत्येनानेन श्रीमद्राघवेन्द्रतीर्थ-गुर्वन्तर्गत भारतीशान्तर्यामी, श्रीमन्मूलरामचन्द्रः इतोऽप्यधिकतया आयुरारोग्यैश्वर्यादीनि अनुगृह्य संरक्षतु इति सम्प्रार्थयामहे ।

इति शम् ॥

विद्वान् राजा. एस्. पवमानाचार्याः
सम्पादकमण्डली

# ಮುನ್ನುಡಿ

"ಇಹ ಭಾರತಭೂತಲೇऽತಿಪುಣ್ಯೇ" ಎಂಬಂತೆ - ಕರ್ಮಭೂಮಿ ಹಾಗೂ ಪುಣ್ಯಭೂಮಿ ಎನಿಸಿದ ಭಾರತದೇಶದ ಜನರು ಅನಾದಿಕಾಲದಿಂದ ದೈವವನ್ನೊಂದು ನಂಬಿ ತಮ್ಮ ತಮ್ಮ ಧರ್ಮಗಳನ್ನು ಅನುಷ್ಠಾನ ಮಾಡುತ್ತಿದ್ದಾರೆ. ನಾವು ಮಾಡುವ ಯಾವುದೇ ಒಂದು ಕರ್ಮಕ್ಕೆ ಯೋಗ್ಯವಾದ ಫಲವನ್ನು ಕೊಡುವವನು ಭಗವಂತನೇ ಎಂದು ಆಸ್ತಿಕರ ನಂಬಿಕೆ. ಆದರೆ ನಿರೀಶ್ವರವಾದಿಗಳು ಈ ತತ್ತ್ವವಾದದ ಮೇಲೆ ದಾಳಿಯನ್ನು ಮಾಡಿ ನಿರೀಶ್ವರವಾದವನ್ನು ಮಂಡಿಸಲು ಪ್ರಯತ್ನಿಸಿದಾಗ ನಾವು ತಪ್ಪದಲೇ ಈಶ್ವರ ಸಿದ್ಧಿಯನ್ನು ಮಾಡಲೇಬೇಕಾಗುತ್ತದೆ. ಇಂತಹ ಪ್ರಸಂಗದಲ್ಲಿ ನಮಗೆ ಒದಗುವ ಅತ್ಯಂತ ಉತ್ತಮವಾದ ಮಾಧ್ಯಮವೆಂದರೆ ವೇದ ಒಂದೇ. ಏಕೆಂದರೆ, ಇಂದ್ರಿಯಗಳಿಂದ, ಅನುಮಾನಗಳಿಂದ ತಿಳಿಯಲಾಗದ ಭಗವಂತನನ್ನು ವೇದಗಳು ತಿಳಿಸಬಲ್ಲವಾದ್ದರಿಂದ ಅವುಗಳನ್ನು ವೇದಗಳೆಂದು ಕರೆಯುತ್ತಾರೆಂದು ಪಿಪ್ಪಲಾದ ಶೃತಿಯಲ್ಲಿ ಹೇಳಲ್ಪಟ್ಟಿದೆ.

**ನೇಂದ್ರಿಯಾಣಿ ನಾನುಮಾನಂ ವೇದಾಹ್ಯೇವೈನಂ ವೇದಯಂತಿ ತಸ್ಮಾದಾ-ಹುರ್ವೇದಾಃ ।** (ಪಿಪ್ಪಲಾದ ಶೃತಿ)

ಇಂತಹ ಭಗವಂತನ ದರ್ಶನಕ್ಕಾಗಿ ನಾವು ಸ್ವೋಚಿತ ಕರ್ಮಾನುಷ್ಠಾನವನ್ನು ತಪ್ಪದಲೇ ಮಾಡಬೇಕಾಗುತ್ತದೆ.

**"ಕರ್ಮಣಾ ಜ್ಞಾನಮಾತನೋತಿ, ಜ್ಞಾನೇನೈವ ಪರಂ ಪದಂ"** ಎಂದು ಹೇಳಿದ್ದರಿಂದ ಕರ್ಮಾನುಷ್ಠಾನವು ನಮಗೆ ಅನಿವಾರ್ಯವಾಯಿತು. ಇಂತಹ ಕರ್ಮಗಳ ತಿಳುವಳಿಕೆಯನ್ನೂ ಕೂಡಾ ವೇದವೇ ನಮಗೆ ತಿಳಿಸಿಕೊಡುತ್ತದೆ. **"ವೇದೋऽಖಿಲೋ ಧರ್ಮಮೂಲಂ"** ಎಂಬ ವಾಕ್ಯದಂತೆ ಸಕಲರಿಗೂ ಯೋಗ್ಯ ಧರ್ಮಗಳನ್ನು ವೇದವು ತಿಳಿಸುತ್ತದೆ.

**"ವಿದಂತ್ಯನೇನ ಧರ್ಮಮಿತಿ ವೇದಃ"** ಎಲ್ಲರೂ ವೇದದಿಂದ ಧರ್ಮವನ್ನು ತಿಳಿಯುತ್ತಾರಾದ್ದರಿಂದ ವೇದವೆಂದು ಇದರ ಅಭಿಪ್ರಾಯ. ಈ ವಿಚಾರದಲ್ಲಿ

ಸ್ಮೃತಿಚಂದ್ರಿಕಾಕಾರರ ಈ ಮಾತು ಅರ್ಥಪೂರ್ಣವಾಗಿ ಇಲ್ಲಿ ಅನ್ವಯವಾಗುತ್ತದೆ - **"ವೇದಪ್ರಣಿಹಿತೋ ಧರ್ಮಸ್ತ್ವಧರ್ಮಸ್ತದ್ವಿಪರ್ಯಯಃ".**

ಮತ್ತೊಂದು ಪ್ರಮಾಣವು ಧರ್ಮಲಕ್ಷಣದ ಅರ್ಥವನ್ನು ವೇದದಿಂದ ತಿಳಿಯುತ್ತೇವಾದ್ದರಿಂದ ಇದಕ್ಕೆ ವೇದವೆಂದು ಹೆಸರು ಎಂದು ಹೇಳುತ್ತದೆ -

**ವಿದಂತ್ಯನನ್ಯಪ್ರಮಾಣವೇದ್ಯಂ ಧರ್ಮಲಕ್ಷಣಮರ್ಥಮಸ್ಮಾದಿತಿ ವೇದಃ ।**
**ತಚ್ಚ ವೇದನಮೇಕೈಕಸ್ಮಾದ್ವಾಕ್ಯಾದ್ಭವತಿ ।**

ಇನ್ನೊಂದೆಡೆ ಮೋಕ್ಷಸುಖವನ್ನು ಕರುಣಿಸುವ ಕರ್ಮಗಳನ್ನು ಹೇಳುವುದರಿಂದ ವೇದಗಳೆಂದು ಕರೆಯಲ್ಪಡುತ್ತವೆ ಎಂದು ಹೇಳಲಾಗಿದೆ -

**ನಿಃಶ್ರೇಸಕರಾಣಿ ಕರ್ಮಾಣಿ ಆವೇದಯಂತೀತಿ ವೇದಾಃ ।**

ಇಂತಹ ಜ್ಞಾನದ ಖಣಿಯಾದ ವೇದದ ಅಧ್ಯಯನಾದಿಗಳನ್ನು ಮಾಡಿದ ಮನುಷ್ಯರು ತನ್ಮೂಲಕ ಸಮಸ್ತ ವಿದ್ಯೆಗಳನ್ನು ಕಲಿತು ಜ್ಞಾನಿಗಳಾಗುತ್ತಾರಾದ್ದರಿಂದಲೂ ಇದಕ್ಕೆ ವೇದವೆನ್ನುತ್ತಾರೆ.

**ಸರ್ವೇ ಮನುಷ್ಯಾಃ ಸರ್ವಾಃ ಸತ್ಯವಿದ್ಯಾಂ ಯೈರ್ಯೇಷು**
**ವಾ ತಥಾ ವಿದ್ವಾಂಸಶ್ಚ ಭವಂತಿ ತೇ ವೇದಾಃ ।**

## ಶ್ರೀವೇದವ್ಯಾಸರು – ವೇದ ವಿಭಾಗ

ಗೌತಮ ಋಷಿಗಳ ಶಾಪದಿಂದ ಜ್ಞಾನಶೂನ್ಯರಾದ ಸಜ್ಜನರ ಉದ್ಧಾರಕ್ಕಾಗಿ ಭಗವಂತನು ವೇದವ್ಯಾಸರಾಗಿ ಅವತರಿಸಿ **"ಅನಂತಾ ವ್ಯ ವೇದಾಃ"** ಎಂಬ ವಾಕ್ಯದಂತೆ ಅನಂತವೇದವು ರಾಶಿಯಾಗಿರುವಾಗ ವೇದಗಳ ವಿಭಾಗ ಮಾಡಿ ವೇದವ್ಯಾಸರೆಂದು ಪ್ರಸಿದ್ಧರಾದರು.

## ವೇದಗಳು

ಸೃಷ್ಟಿಯ ಪ್ರಾರಂಭದಲ್ಲಿ ಅನಾದಿಕಾಲದಿಂದ ಇದ್ದ ವೇದಗಳನ್ನು ಹಯಗ್ರೀವ ದೇವರು ಅನಾಯಾಸವಾಗಿ ಜಗತ್ತಿಗೆ ಸಾರಿದರು. ಈ ವಿಚಾರವನ್ನು ಋಗ್ಭಾಷ್ಯಟೀಕಾ-ದಲ್ಲಿ ಟೀಕಾಕೃತ್ಪಾದರು ತಿಳಿಸಿರುತ್ತಾರೆ.

**ವೇದಾದಿಕಂ ಸರ್ವಂ ನಿಃಶ್ವಸಿತಮಿವಾನಾಯಾಸೇನಾದಿಕಾಲೇ**
**ತೇನೋಚ್ಚಾರಿತಮಿತ್ಯರ್ಥಃ ।**

ಅನಾದಿಕಾಲದಿಂದ ಇದ್ದುದರಿಂದ ಈ ವೇದಗಳು ನಿತ್ಯವಾಗಿವೆ. ನಿತ್ಯವಾದ್ದರಿಂದ ಇವುಗಳನ್ನು ಅಪೌರುಷೇಯಗಳೆಂದು ಕರೆಯುತ್ತಾರೆ. ಅದಕ್ಕೇನೇ ಶ್ರೀಮದಾಚಾರ್ಯರು **"ತತ್ತ್ವಸಂಖ್ಯಾನ"**ದಲ್ಲಿ **"ನಿತ್ಯಾ ವೇದಾಃ"** ಎಂದಿದ್ದಾರೆ.

ಶ್ರೀಹಯಗ್ರೀವದೇವರಾದರೂ ಇದ್ದ ವೇದವನ್ನೇ ಉಚ್ಚರಿಸಿದ್ದಾರೆಯೇ ಹೊರತು, ವೇದಗಳಿಗೆ ಅವರು ಕರ್ತೃಗಳಲ್ಲವೆಂದು ಶ್ರೀವಾದಿರಾಜರು ಯುಕ್ತಿಮಲ್ಲಿಕಾದಲ್ಲಿ ತಿಳಿಸಿರುತ್ತಾರೆ.

**ಯಸ್ಯಾಸ್ತಿ ಪುಸ್ತಕಂ ಹಸ್ತೇ....**

ಇಂತಹ ವೇದಾಧ್ಯಾಯಿಯು ಮಂಗಳಸ್ವರೂಪನು ಎಂದು ವೇದದಲ್ಲೇ ಉಚ್ಚರಿತವಾಗಿದೆ.

**ವೇದಃ ಶಿವಃ ಶಿವೋ ವೇದಃ ವೇದಾಧ್ಯಾಯೀ ಸದಾಶಿವಃ ।**

## ವೇದವೇ ಮುಖ್ಯ ಪರವಿದ್ಯೆ

ಶ್ರೀಮಧ್ವಾಚಾರ್ಯರ ಸಿದ್ಧಾಂತ ಪ್ರಕಾರ ಸಮಸ್ತ ವೇದವಿದ್ಯೆಗಳೂ ಪರಮ ಮುಖ್ಯ ವಸ್ತುವಾಗಿರುವ ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ. ಹೀಗೆ ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವಾಗ ಪರವಿದ್ಯೆಯೆಂಬ ಹೆಸರನ್ನು ಹೊಂದಿರುವ ವಿದ್ಯೆಗಳೇ ಪರಮಾತ್ಮನ ಪರವಾಗಿ ಅನುಸಂಧಾನ ಮಾಡಲ್ಪಡದಿರುವಾಗ "ಅಪರವಿದ್ಯೆ" ಎಂಬ ಹೆಸರನ್ನು ಹೊಂದುತ್ತವೆ. **"ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ । ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ।"** ಋಗಾದಿ ವಿದ್ಯೆಗಳು ಪರಮಾತ್ಮನನ್ನು ಪ್ರತಿಪಾದಿಸದೆ ಇರುವ ದೆಸೆಯಲ್ಲಿ ಅಪರವಿದ್ಯೆ-ಗಳೆಂದೂ, ಪರಮಾತ್ಮನ ಗುಣಗಳನ್ನು ಪ್ರತಿಪಾದಿಸುವಾಗ ಪರವಿದ್ಯೆಗಳೆಂದೂ ಹೆಸರನ್ನು ಹೊಂದುತ್ತವೆ ಎಂಬರ್ಥವುಳ್ಳ ಪರಮಸಂಹಿತಾ ಎಂಬ ಗ್ರಂಥವನ್ನು ಮೇಲ್ಕಂಡ ವಿಷಯದಲ್ಲಿ, ಶ್ರೀಮಧ್ವಾಚಾರ್ಯರು ಆಧಾರವಾಗಿ ಕೊಟ್ಟಿರುತ್ತಾರೆ. ಜ್ಯೋತಿಷ್ಟೋಮಾದಿ ವೇದವಿಹಿತ ಕರ್ಮವು ಒಂದೇ ಆದರೂ ಸ್ವರ್ಗಾದಿಕಾಮನೆಯಿಂದ ಮಾಡಲ್ಪಟ್ಟರೆ ಪ್ರವೃತ್ತ ಕರ್ಮವೆಂದೂ, ಆ ಕಾಮನೆಯನ್ನು ಬಿಟ್ಟು ಪರಮಾತ್ಮನ ಪ್ರೀತಿಯ ಉದ್ದೇಶದಿಂದಲೇ ಮಾಡಲ್ಪಟ್ಟರೆ ನಿವೃತ್ತಕರ್ಮವೆಂದು ಹೇಳಲ್ಪಡುತ್ತದೆ ಮತ್ತು ಅನ್ನವು ಒಂದೇ ಆದರೂ ಆಯಾ ವ್ಯಂಜನಗಳ ಮಿಶ್ರಣದಿಂದ ಪಥ್ಯ ಅಥವಾ ಅಪಥ್ಯವಾಗುತ್ತವೆ. ಹಾಗೆಯೇ ಋಗಾದಿ ವಿದ್ಯೆಗಳು ಒಂದೇ ಆಗಿದ್ದರೂ ಆಯಾ ಉಪಾಧಿಭೇದದಿಂದ ಪರವಿದ್ಯೆ ಮತ್ತು ಅಪರವಿದ್ಯೆ ಎಂಬುದಾಗಿ ಹೆಸರನ್ನು ಹೊಂದುತ್ತವೆ.

ಸ್ಮೃತಿಚಂದ್ರಿಕಾಕಾರರ ಈ ಮಾತು ಅರ್ಥಪೂರ್ಣವಾಗಿ ಇಲ್ಲಿ ಅನ್ವಯವಾಗುತ್ತದೆ - **"ವೇದಪ್ರಣಿಹಿತೋ ಧರ್ಮಸ್ತ್ವಧರ್ಮಸ್ತದ್ವಿಪರ್ಯಯಃ".**

ಮತ್ತೊಂದು ಪ್ರಮಾಣವು ಧರ್ಮಲಕ್ಷಣದ ಅರ್ಥವನ್ನು ವೇದದಿಂದ ತಿಳಿಯುತ್ತೇವಾದ್ದರಿಂದ ಇದಕ್ಕೆ ವೇದವೆಂದು ಹೆಸರು ಎಂದು ಹೇಳುತ್ತದೆ -

**ಏದಂತ್ಯನನ್ಯಪ್ರಮಾಣವೇದ್ಯಂ ಧರ್ಮಲಕ್ಷಣಮರ್ಥಮಸ್ಮಾದಿತಿ ವೇದಃ ।**
**ತಚ್ಚ ವೇದನಮೇಕೈಕಸ್ಮಾದ್ವಾಕ್ಯಾದ್ಭವತಿ ।**

ಇನ್ನೊಂದೆಡೆ ಮೋಕ್ಷಸುಖವನ್ನು ಕರುಣಿಸುವ ಕರ್ಮಗಳನ್ನು ಹೇಳುವುದರಿಂದ ವೇದಗಳೆಂದು ಕರೆಯಲ್ಪಡುತ್ತವೆ ಎಂದು ಹೇಳಲಾಗಿದೆ -

**ನಿಃಶ್ರೇಸಕರಾಣಿ ಕರ್ಮಾಣಿ ಆವೇದಯಂತೀತಿ ವೇದಾಃ ।**

ಇಂತಹ ಜ್ಞಾನದ ಖಣಿಯಾದ ವೇದದ ಅಧ್ಯಯನಾದಿಗಳನ್ನು ಮಾಡಿದ ಮನುಷ್ಯರು ತನ್ಮೂಲಕ ಸಮಸ್ತ ವಿದ್ಯೆಗಳನ್ನು ಕಲಿತು ಜ್ಞಾನಿಗಳಾಗುತ್ತಾರಾದ್ದರಿಂದಲೂ ಇದಕ್ಕೆ ವೇದವೆನ್ನುತ್ತಾರೆ.

**ಸರ್ವೇ ಮನುಷ್ಯಾಃ ಸರ್ವಾಃ ಸತ್ಯವಿದ್ಯಾಂ ಯೈರ್ಯೇಷು**
**ವಾ ತಥಾ ವಿದ್ವಾಂಸಶ್ಚ ಭವಂತಿ ತೇ ವೇದಾಃ ।**

## ಶ್ರೀವೇದವ್ಯಾಸರು – ವೇದ ವಿಭಾಗ

ಗೌತಮ ಋಷಿಗಳ ಶಾಪದಿಂದ ಜ್ಞಾನಶೂನ್ಯರಾದ ಸಜ್ಜನರ ಉದ್ಧಾರಕ್ಕಾಗಿ ಭಗವಂತನು ವೇದವ್ಯಾಸರಾಗಿ ಅವತರಿಸಿ **"ಅನಂತಾ ವೈ ವೇದಾಃ"** ಎಂಬ ವಾಕ್ಯದಂತೆ ಅನಂತವೇದವು ರಾಶಿಯಾಗಿರುವಾಗ ವೇದಗಳ ವಿಭಾಗ ಮಾಡಿ ವೇದವ್ಯಾಸರೆಂದು ಪ್ರಸಿದ್ಧರಾದರು.

### ವೇದಗಳು

ಸೃಷ್ಟಿಯ ಪ್ರಾರಂಭದಲ್ಲಿ ಅನಾದಿಕಾಲದಿಂದ ಇದ್ದ ವೇದಗಳನ್ನು ಹಯಗ್ರೀವ ದೇವರು ಅನಾಯಾಸವಾಗಿ ಜಗತ್ತಿಗೆ ಸಾರಿದರು. ಈ ವಿಚಾರವನ್ನು ಋಗ್ಭಾಷ್ಯಟೀಕಾ-ದಲ್ಲಿ ಟೀಕಾಕೃತ್ಪಾದರು ತಿಳಿಸಿರುತ್ತಾರೆ.

**ವೇದಾದಿಕಂ ಸರ್ವಂ ನಿಃಶ್ವಸಿತಮಿವಾನಾಯಾಸೇನಾದಿಕಾಲೇ**
**ತೇನೋಚ್ಚಾರಿತಮಿತ್ಯರ್ಥಃ ।**

ಅನಾದಿಕಾಲದಿಂದ ಇದ್ದುದರಿಂದ ಈ ವೇದಗಳು ನಿತ್ಯವಾಗಿವೆ. ನಿತ್ಯವಾದ್ದರಿಂದ ಇವುಗಳನ್ನು ಅಪೌರುಷೇಯಗಳೆಂದು ಕರೆಯುತ್ತಾರೆ. ಅದಕ್ಕೇನೇ ಶ್ರೀಮದಾಚಾರ್ಯರು **"ತತ್ತ್ವಸಂಖ್ಯಾನ"**ದಲ್ಲಿ **"ನಿತ್ಯಾ ವೇದಾಃ"** ಎಂದಿದ್ದಾರೆ.

ಶ್ರೀಹಯಗ್ರೀವದೇವರಾದರೂ ಇದ್ದ ವೇದವನ್ನೇ ಉಚ್ಚರಿಸಿದ್ದಾರೆಯೇ ಹೊರತು, ವೇದಗಳಿಗೆ ಅವರು ಕರ್ತೃಗಳಲ್ಲವೆಂದು ಶ್ರೀವಾದಿರಾಜರು ಯುಕ್ತಿಮಲ್ಲಿಕಾದಲ್ಲಿ ತಿಳಿಸಿರುತ್ತಾರೆ.

**ಯಸ್ಯಾಸ್ತಿ ಪುಸ್ತಕಂ ಹಸ್ತೇ....**

ಇಂತಹ ವೇದಾಧ್ಯಾಯಿಯು ಮಂಗಳಸ್ವರೂಪನು ಎಂದು ವೇದದಲ್ಲೇ ಉಚ್ಚರಿತವಾಗಿದೆ.

**ವೇದಃ ಶಿವಃ ಶಿವೋ ವೇದಃ ವೇದಾಧ್ಯಾಯೀ ಸದಾಶಿವಃ ।**

## ವೇದವೇ ಮುಖ್ಯ ಪರವಿದ್ಯೆ

ಶ್ರೀಮಧ್ವಾಚಾರ್ಯರ ಸಿದ್ಧಾಂತ ಪ್ರಕಾರ ಸಮಸ್ತ ವೇದವಿದ್ಯೆಗಳೂ ಪರಮ ಮುಖ್ಯ ವಸ್ತುವಾಗಿರುವ ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ. ಹೀಗೆ ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವಾಗ ಪರವಿದ್ಯೆಯೆಂಬ ಹೆಸರನ್ನು ಹೊಂದಿರುವ ವಿದ್ಯೆಗಳೇ ಪರಮಾತ್ಮನ ಪರವಾಗಿ ಅನುಸಂಧಾನ ಮಾಡಲ್ಪಡದಿರುವಾಗ "ಅಪರವಿದ್ಯೆ" ಎಂಬ ಹೆಸರನ್ನು ಹೊಂದುತ್ತವೆ. **"ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ । ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ।"** ಋಗಾದಿ ವಿದ್ಯೆಗಳು ಪರಮಾತ್ಮನನ್ನು ಪ್ರತಿಪಾದಿಸದೆ ಇರುವ ದೆಸೆಯಲ್ಲಿ ಅಪರವಿದ್ಯೆ-ಗಳೆಂದೂ, ಪರಮಾತ್ಮನ ಗುಣಗಳನ್ನು ಪ್ರತಿಪಾದಿಸುವಾಗ ಪರವಿದ್ಯೆಗಳೆಂದೂ ಹೆಸರನ್ನು ಹೊಂದುತ್ತವೆ ಎಂಬರ್ಥವುಳ್ಳ ಪರಮಸಂಹಿತಾ ಎಂಬ ಗ್ರಂಥವನ್ನು ಮೇಲ್ಕಂಡ ವಿಷಯದಲ್ಲಿ, ಶ್ರೀಮಧ್ವಾಚಾರ್ಯರು ಆಧಾರವಾಗಿ ಕೊಟ್ಟಿರುತ್ತಾರೆ. ಜ್ಯೋತಿಷ್ಟೋಮಾದಿ ವೇದವಿಹಿತ ಕರ್ಮವು ಒಂದೇ ಆದರೂ ಸ್ವರ್ಗಾದಿಕಾಮನೆಯಿಂದ ಮಾಡಲ್ಪಟ್ಟರೆ ಪ್ರವೃತ್ತ ಕರ್ಮವೆಂದೂ, ಆ ಕಾಮನೆಯನ್ನು ಬಿಟ್ಟು ಪರಮಾತ್ಮನ ಪ್ರೀತಿಯ ಉದ್ದೇಶದಿಂದಲೇ ಮಾಡಲ್ಪಟ್ಟರೆ ನಿವೃತ್ತಕರ್ಮವೆಂದು ಹೇಳಲ್ಪಡುತ್ತದೆ ಮತ್ತು ಅನ್ನವು ಒಂದೇ ಆದರೂ ಆಯಾ ವ್ಯಂಜನಗಳ ಮಿಶ್ರಣದಿಂದ ಪಥ್ಯ ಅಥವಾ ಅಪಥ್ಯವಾಗುತ್ತವೆ. ಹಾಗೆಯೇ ಋಗಾದಿ ವಿದ್ಯೆಗಳು ಒಂದೇ ಆಗಿದ್ದರೂ ಆಯಾ ಉಪಾಧಿಭೇದದಿಂದ ಪರವಿದ್ಯೆ ಮತ್ತು ಅಪರವಿದ್ಯೆ ಎಂಬುದಾಗಿ ಹೆಸರನ್ನು ಹೊಂದುತ್ತವೆ.

ಋಗಾದಿಗಳು ಸರ್ವದಾ ವಿಷ್ಣುವಾಚಕಗಳೇ ಆಗಿದ್ದರೂ ಆ ಅನುಸಂಧಾನವು ಇರುವಾಗ ಅಂತಹ ಅಧಿಕಾರಿಯನ್ನು ಕುರಿತು ಪರವಿದ್ಯೆಗಳೆಂದೂ, ಆ ಅನುಸಂಧಾನ-ವಿಲ್ಲದಿರುವ ಅಧಿಕಾರಿಯನ್ನು ಕುರಿತು ಅಪರವಿದ್ಯೆಗಳೆಂದೂ ಹೇಳಿಸಿಕೊಳ್ಳಲ್ಪಡು-ತ್ತವೆ. ಚತುರ್ಮುಖ ಬ್ರಹ್ಮನೇ ಮೊದಲಾದ ಉತ್ತಮಾಧಿಕಾರಿಗಳು ಯಾವಾಗಲೂ ಋಗಾದಿ ಶಾಸ್ತ್ರಗಳಿಂದ ಪರಮಾತ್ಮನ ಸರ್ವೋತ್ತಮತ್ವವನ್ನೇ ಅನುಸಂಧಾನ ಮಾಡುತ್ತಾರೆ. ಅವರಿಗೆ ಋಗ್ವೇದಾದಿಗಳು ಯಾವಾಗಲೂ ಪರವಿದ್ಯೆಯೇ ಆದರೂ ಇತರರಿಗೆ ಅಪರವಿದ್ಯೆಗಳೂ ಆಗುತ್ತವೆ.

ಈ ವಿಷಯವನ್ನು ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರೀಮದಾಚಾರ್ಯರು ಸ್ಕಾಂದಪುರಾಣದ ಪ್ರಮಾಣವನ್ನು ಲೇಖಿಸಿ ಹೀಗೆ ವಿವರಣೆ ಕೊಟ್ಟಿದ್ದಾರೆ.

**ಉತ್ಸನ್ನಾನ್ ಭಗವಾನ್ ವೇದಾನ್ ಉಜ್ಜಹಾರ ಹರಿಃ ಸ್ವಯಮ್ ।**
**ಚತುರ್ಧಾ ವ್ಯಭಜತ್ತಾಂಶ್ಚ ಚತುರ್ವಿಂಶತಿಧಾ ಪುನಃ ।**
**ಶತಧಾ ಚೈಕಧಾ ಚೈವ ತಥೈವ ಚ ಸಹಸ್ರಧಾ ।**
**ಕೃಷ್ಣೋ ದ್ವಾದಶಧಾ ಚೈವ –**

ಮೊದಲೇ ವಿಭಕ್ತವಾದ ವೇದವನ್ನು ಅಪಪಾಠಾದಿಗಳಿಂದ ತಿರೋಹಿತವಾದಾಗ ಪುನಃ ಶ್ರೀವೇದವ್ಯಾಸರು **"ಋಗ್ಯಜುಸ್ಸಾಮಾಥರ್ವ"** ಎಂಬುದಾಗಿ ನಾಲ್ಕು ಭಾಗ-ಗಳನ್ನಾಗಿ ಅವೇ ಹೆಸರುಗಳಿಂದ ವಿಂಗಡಿಸಿದರು. ವೇದವನ್ನು ವಿಭಾಗಿಸುವಾಗ ಮೊದಲು 1) ಋಗ್ವೇದ, 2) ಯಜುರ್ವೇದ, 3) ಸಾಮವೇದ, 4) ಅಥರ್ವವೇದ-ವೆಂದು ನಾಲ್ಕು ವಿಭಾಗಮಾಡಿ, ಅನಂತರ ಋಗ್ವೇದವನ್ನು 24 ಶಾಖೆಗಳನ್ನಾಗಿ, ಯಜುರ್ವೇದವನ್ನು 101 ಶಾಖೆಗಳನ್ನಾಗಿ, ಸಾಮವೇದವನ್ನು 1000 ಶಾಖೆ-ಗಳನ್ನಾಗಿ, ಅಥರ್ವವೇದವನ್ನು 12 ಶಾಖೆಗಳನ್ನಾಗಿ ವಿಂಗಡಿಸಿದರು.

ಇದಲ್ಲದೇ ಅಪಾರವೇದವನ್ನು ಸಂಹಿತೆಗಳು, ಬ್ರಾಹ್ಮಣಗಳು, ಅರಣ್ಯಕಗಳು, ಉಪನಿಷತ್ತುಗಳು ಎಂಬುದಾಗಿ ನಾಲ್ಕು ಭಾಗಗಳನ್ನಾಗಿ ವಿಭಾಗಿಸಿದ್ದಾರೆ.

## ಋಗ್ವೇದ

ವೇದಗಳಲ್ಲಿ ಒಂದಾದ ಋಗ್ವೇದವು ಭಗವಂತನ ಬಲಭಾಗವೆಂದು ವೇದವೇ ಸಾರಿದೆ.

**"ಋಗ್ದಕ್ಷಿಣಃ ಪಕ್ಷಃ"**

ಋಕ್‌ನ ಲಕ್ಷಣವನ್ನು ಹೇಳುವ ಪ್ರಸಂಗದಲ್ಲಿ ಈ ರೀತಿ ಹೇಳಲ್ಪಟ್ಟಿದೆ.

"**ನಿಯತಾಕ್ಷರಾವಸಾನಾ ಛಂದೋನಿಬದ್ಧಾ ಋಕ್**" ಎಂದರೆ - ಛಂದೋಬದ್ಧವಾದ ವಾಕ್ಯಗಳನ್ನು ಪ್ರಧಾನವಾಗಿ ಅಳವಡಿಸಿದ ವೇದಭಾಗಕ್ಕೆ "ಋಗ್ವೇದ"ವೆಂಬ ಹೆಸರು ಬಂದಿದೆ.

## ಋಗ್ವೇದ ಶಾಖೆಗಳು

(1) ಮುದ್ಗಲ, (2) ಗಾಲವ, (3) ಶಾಲೀಯ, (4) ವಾತ್ಸ್ಯಾಯನ, (5) ಶೈಶಿರಿ ಈ ಐದು ಶಾಕಲ ಶಾಖೆಗಳು, (6) ಬೌಧ್ಯ, (7) ಅಗ್ನಿಮಾತರ, (8) ಪರಾಶರ, (9) ಜಾತೂಕರ್ಣ್ಯ ಈ ನಾಲ್ಕು ಬಾಷ್ಕಲ ಶಾಖೆಗಳು, (10) ಆಶ್ವಲಾಯನ, (11) ಸಾಂಖ್ಯಾಯನ, (12) ಕಾಷೀತಕಿ, (13) ಮಹಾಕೌಷೀತಕಿ ಈ ನಾಲ್ಕು ಶಾಂಖಾಯನ ಶಾಖೆಗಳು, (14) ಶಾಂಬವ್ಯ, (15) ಮಾಂಡುಕೇಯ, (16) ಬಹ್ವೃಚ, (17) ಪೈಂಗ್ಯ, (18) ಉದ್ದಾಲಕ - ಗೋತಮ - ಅರುಣಶಾಖಾ, (19) ಶತಬಲಾಕ್ಷ, (20) ಗಜ-ಹಾಸ್ತಿಕ, (21 ರಿಂದ 23) ಬಾಷ್ಕರಿ, ಭಾರದ್ವಾಜ (ಅಪನೀತ - ಪನ್ನಗಾರಿ - ಅರ್ಜನ), (24) ಐತರೇಯ, (25) ವಾಸಿಷ್ಠ, (26) ಸುಲಭ, (27) ಶೌನಕ.

## ಋಗ್ವೇದದ ಶಾಖಾಸಂಖ್ಯೆಗಳಲ್ಲಿ ಅಭಿಪ್ರಾಯಭೇದ

ಶ್ರೀಪತಂಜಲಿ ಮಹರ್ಷಿಗಳು ವ್ಯಾಕರಣ ಮಹಾಭಾಷ್ಯದಲ್ಲಿ "**ಏಕವಿಂಶತಿಧಾ ಬಾಹ್ವೃಚ್ಯಂ**" ಎಂಬ ಮಾತಿನಿಂದ ಋಗ್ವೇದಕ್ಕೆ 21 ಶಾಖೆಗಳೆಂದು ಹೇಳಿದ್ದಾರೆ.

ಶ್ರೀಮಧ್ವಾಚಾರ್ಯರು ಸೂತ್ರಭಾಷ್ಯದಲ್ಲಿ ಪುರಾಣವಾಕ್ಯಗಳ ಉಲ್ಲೇಖದಿಂದ 24 ಶಾಖೆಗಳೆಂದು ಹೇಳಿದ್ದಾರೆ.

ಆದರೆ, ಲೋಕದಲ್ಲಿ ಪ್ರಚಲಿತವಿರುವ ಋಗ್ವೇದ ಶಾಖೆಗಳೆಂದು ಹೇಳಲ್ಪಡುವ 27 ಶಾಖೆಗಳ ಹೆಸರನ್ನು ಈ ಪ್ರಸಂಗದಲ್ಲಿ ನಾವು ಉದಾಹರಿಸಿದ್ದೇವೆ. ಆಚಾರ್ಯರು ಉದಾಹರಿಸಿದ 24 ಶಾಖೆಗಳು ಯಾವುವು ಎಂದು ನಮಗೆ ಸ್ಪಷ್ಟವಾಗಿ ಗೋಚರವಾಗುತ್ತಿಲ್ಲವಾದ್ದರಿಂದ, ಈ ಉದಾಹೃತ 27 ಶಾಖೆಗಳಲ್ಲಿ ಆಚಾರ್ಯರು ಉದಾಹರಿಸಿರುವ ಪ್ರಕಾರ, ಹೆಚ್ಚಿನ ಶಾಖೆಗಳು ನಾಮಾಂತರವಾದರೂ ಇರಬಹುದು ಅಥವಾ 24 ರಲ್ಲೇ ಅಂತರ್ಗತವಾಗಬಹುದೆಂದು ಊಹಿಸಬಹುದು.

ಆದರೆ ಈಗ ಉಪಲಬ್ಧವಿರುವ ಮೂರು ಶಾಖೆಗಳು ಮಾತ್ರ ಪ್ರಸಿದ್ಧವಾಗಿವೆ.

1) ಶಾಕಲ, 2) ಬಾಷ್ಕಲ, 3) ಸಾಂಖ್ಯಾಯನ

# ಋಗ್ವೇದಸಂಹಿತೆಯ ಭಾಗ – ವಿಭಾಗಗಳ ಕೋಷ್ಟಕ

ಋಗ್ವೇದಸಂಹಿತೆಯು - ಅಷ್ಟಕ - ಅಧ್ಯಾಯ - ವರ್ಗ - ಋಕ್‌ಗಳು ಎಂಬುದಾಗಿ ಅಥವಾ ಮಂಡಲ - ಅನುವಾಕ - ಸೂಕ್ತ - ಋಕ್‌ಗಳು ಎಂಬುದಾಗಿಯೂ ವಿಭಕ್ತವಾಗಿದೆ.

| ಅಕ್ಷರಸಂಖ್ಯೆ | ಅಷ್ಟಕಗಳು | ಅಧ್ಯಾಯಗಳು | ವರ್ಗಗಳು | ಋಕ್ಕುಗಳು |
|---|---|---|---|---|
| 48931 | ಪ್ರಥಮಾಷ್ಟಕದಲ್ಲಿ | 8 | 265 | 1370 |
| 51718 | ದ್ವಿತೀಯಾಷ್ಟಕದಲ್ಲಿ | 8 | 221 | 1147 |
| 47636 | ತೃತೀಯಾಷ್ಟಕದಲ್ಲಿ | 8 | 225 | 1209 |
| 49762 | ಚತುರ್ಥಾಷ್ಟಕ | 8 | 250 | 1289 |
| 48022 | ಪಂಚಮಾಷ್ಟಕ | 8 | 238 | 1263 |
| 51456 | ಷಷ್ಠಾಷ್ಟಕ | 8 | 331 | 1730 |
| 47562 | ಸಪ್ತಮಾಷ್ಟಕ | 8 | 248 | 1263 |
| 52178 | ಅಷ್ಟಮಾಷ್ಟಕ | 8 | 246 | 1281 |
| **397265** | **ಒಟ್ಟು** | **64** | **2024** | **10,552** |

| ಮಂಡಲಗಳು | ಅನುವಾಕಗಳು | ಸೂಕ್ತಗಳು | ಋಕ್ಕುಗಳು |
|---|---|---|---|
| ಪ್ರಥಮಮಂಡಲದಲ್ಲಿ | 24 | 191 | 2006 |
| ದ್ವಿತೀಯಮಂಡಲದಲ್ಲಿ | 4 | 43 | 429 |
| ತೃತೀಯಮಂಡಲದಲ್ಲಿ | 5 | 62 | 617 |
| ಚತುರ್ಥಮಂಡಲದಲ್ಲಿ | 5 | 58 | 589 |
| ಪಂಚಮಮಂಡಲದಲ್ಲಿ | 6 | 87 | 727 |
| ಷಷ್ಠಮಂಡಲದಲ್ಲಿ | 6 | 75 | 765 |
| ಸಪ್ತಮಮಂಡಲದಲ್ಲಿ | 6 | 104 | 841 |
| ಅಷ್ಟಮಮಂಡಲದಲ್ಲಿ | 10 | 103 | 1716 |
| ನವಮಮಂಡಲದಲ್ಲಿ | 7 | 114 | 1108 |
| ದಶಮಮಂಡಲದಲ್ಲಿ | 12 | 191 | 1754 |
| | **85** | **1028** | **10552** |

ಋಗ್ವೇದವನ್ನು ಶಾಕಲಶಾಖೆ - ಬಾಷ್ಕಲಶಾಖೆ ಎಂಬುದಾಗಿ ಎರಡು ವಿಧವಾಗಿಯೂ, ಸೂಕ್ತಗಳು 1028 ಎಂಬುದಾಗಿಯೂ, ಮಂತ್ರಗಳು 10552 ಎಂಬುದಾಗಿಯೂ ವಿಭಾಗಿಸಿದ್ದಾರೆ.

ಇಂತಹ ಅನಂತವಾದ ವೇದಗಳಿಗೆ ಶಿಕ್ಷಾ - ವ್ಯಾಕರಣಂ - ಛಂದೋ ನಿರುಕ್ತಂ - ಜ್ಯೋತಿಷಂ - ಕಲ್ಪಃ ಎಂಬುದಾಗಿ ಆರು ಅಂಗಗಳಿವೆ. ಈ ಆರು ಅಂಗಗಳ ಸಹಾಯವಿಲ್ಲದಲೇ ವೇದಾರ್ಥದ ಜ್ಞಾನವಾಗುವುದಿಲ್ಲ.

## ಋಗ್ವೇದ ಭಾಷ್ಯಕಾರರು

| | | |
|---|---|---|
| 1. | ಸ್ಕಂದಸ್ವಾಮಿ - ಈಗ ಉಪಲಬ್ಧವಾದ ಭಾಷ್ಯಗಳಲ್ಲಿ ಮೊದಲನೆಯದು. | ಕಾಲ - ಸುಮಾರು 630 ಕ್ರಿ.ಶ. |
| 2. | ನಾರಾಯಣ | ಕಾಲ - 630 ಕ್ರಿ.ಶ. |
| 3. | ಉದ್ಗೀಥ | ಕಾಲ - 630 ಕ್ರಿ.ಶ. |
| 4. | ಹಸ್ತಾಮಲಕ | ಕಾಲ - 700 ಕ್ರಿ.ಶ. |
| 5. | ವೆಂಕಟಮಾಧವ | ಕಾಲ - 1100-1200 ಕ್ರಿ.ಶ. |
| 6. | ಲಕ್ಷ್ಮಣ | ಕಾಲ - 1092 ಕ್ರಿ.ಶ. |
| 7. | ಧಾನುಷ್ಕ | ಕಾಲ - 1300 ಕ್ರಿ.ಶ. |
| 8. | ಶ್ರೀಮಧ್ವಾಚಾರ್ಯರು (ಶ್ರೀಮದಾನಂದತೀರ್ಥರು) | ಕಾಲ - 1192-1277 ಕ್ರಿ.ಶ. |
| 9. | ಆತ್ಮಾನಂದ | ಕಾಲ - 1200-1300 ಕ್ರಿ.ಶ. |
| 10. | ಸಾಯಣಾಚಾರ್ಯರು | ಕಾಲ - 1315-1387 ಕ್ರಿ.ಶ. |
| 11. | ರಾವಣ | ಕಾಲ - 1600 ಕ್ರಿ.ಶ. |
| 12. | ಮುದ್ಗಲ | ಕಾಲ - 1413-1419 ಕ್ರಿ.ಶ. |
| 13. | ಚತುರ್ವೇದ ಸ್ವಾಮಿ | ಕಾಲ - 1500 ಕ್ರಿ.ಶ. |
| 14. | ದೇವಸ್ವಾಮಿ | |
| 15. | ಭಟ್ಟಭಾಸ್ಕರ | |
| 16. | ಉವಟ | |
| 17. | ಹರದತ್ತ | |

## ಋಗ್ವೇದ ಪದಪಾಠಕಾರರು

1. ಶಾಲಕ್ಯ, 2. ರಾವಣ

ಋಗ್ವೇದಕ್ಕೆ ಏಳು ಅನುಕ್ರಮಣಿಕೆಗಳನ್ನು ಶೌನಕ ಮಹರ್ಷಿಗಳು ಬರೆದಿರುವರು. ಅನುಕ್ರಮಣಿಕೆ ಎಂದರೆ ಅಕಾರಾದಿ ಕ್ರಮದಿಂದ ಮಂತ್ರಗಳನ್ನು ಸೂಚಿಸುವ ಪಟ್ಟಿ. ಕಾತ್ಯಾಯನರೂ ಕೂಡ ಋಗ್ವೇದಕ್ಕೆ ಅನುಕ್ರಮಣಿಕೆಯನ್ನು ಬರೆದಿದ್ದಾರೆ.

**"ಋಗ್ಭಾಷ್ಯಂ ಚ ಚಕಾರಾಸೌ ಸರ್ವವೇದಾರ್ಥನಿರ್ಣಯಮ್"** ಎಂದು ಗ್ರಂಥಮಾಲಿಕಾಸ್ತೋತ್ರದಲ್ಲಿ ಶ್ರೀವ್ಯಾಸರಾಜರು ಹೇಳಿದಂತೆ, ಋಗ್ಭಾಷ್ಯವು ಸರ್ವ-ವೇದಾರ್ಥನಿರ್ಣಾಯಕವಾಗಿದೆ.

ಶ್ರೀಮದಾಚಾರ್ಯರಿಂದ ರಚಿತವಾದ ಋಗ್ಭಾಷ್ಯವು, ಋಗ್ವೇದದ 64 ಅಧ್ಯಾಯ-ಗಳಲ್ಲಿ ಮೊದಲ ಮೂರು ಅಧ್ಯಾಯಗಳಿಗೆ ರಚಿತವಾಗಿರುವ ಭಾಷ್ಯ. 40 ಸೂಕ್ತಗಳಿಗೆ 489 ಋಕ್‌ಗಳಿಗೆ ಶ್ರೀಆಚಾರ್ಯರ ವಿವರಣೆ ಸಿಗುತ್ತದೆ. ವೈದಿಕಸಾಹಿತ್ಯಕ್ಕೆ ರಚಿತ-ವಾಗಿರುವ ಶ್ಲೋಕರೂಪವಾದ ಏಕೈಕ ಭಾಷ್ಯ ಎಂಬುದು ಇದರ ವೈಶಿಷ್ಟ್ಯ.

ಶ್ರೀಪೂರ್ಣಪ್ರಜ್ಞರು ವೈದಿಕಸಾಹಿತ್ಯಕ್ಕೆ ನೀಡಿದ ಅತ್ಯಪೂರ್ವ ವಿಷಯಗಳಲ್ಲಿ ಎರಡು ಬಹಳ ಮುಖ್ಯವಾದವು.

1. ವರ್ಣ - ಪದ - ವಾಕ್ಯ - ಪ್ರಕರಣ - ಮಹಾಪ್ರಕರಣ ಹೀಗೆ ವೇದವು ಪ್ರತಿ ಹಂತದಲ್ಲೂ ಪರಮಾತ್ಮನನ್ನೇ ಪ್ರತಿಪಾದಿಸುತ್ತದೆ.

2. ವೇದದ ಮೂರು ಅರ್ಥಗಳಲ್ಲಿ ದೇಹಾಂತರ್ಗತ ಭಗವದ್ರೂಪವೂ ಒಂದು.

ಹಿಂದಿನ ಮತಾಚಾರ್ಯರು ಉಪನಿಷತ್ತುಗಳನ್ನು ಮಾತ್ರ ಜ್ಞಾನಕಾಂಡ ಎಂದು ತಿಳಿದು ಅವುಗಳಿಗೆ ಮಾತ್ರ ವಿವರಣೆ ನೀಡುವ ಸಂಪ್ರದಾಯ ರೂಢಿಸಿಕೊಂಡಿದ್ದರು. ಮೀಮಾಂಸಕರು ಉಪನಿಷದ್ಭಾಗವನ್ನು ಗೌಣವಾಗಿ ಕಂಡಿದ್ದಾರೆ. ಕರ್ಮದ ಮಹತ್ವ, ಕರ್ಮವೇ ತಾರಕ ಎಂದು ಸಂಹಿತಾಭಾಗದಲ್ಲಿ ದೇವರಿಗಾಗಲಿ, ದೇವತೆಗಳಿಗಾಗಲಿ ಅವಕಾಶ ಇಲ್ಲವೇ ಇಲ್ಲ ಎಂದು ಹೇಳುವರು.

**"ವೇದೈಶ್ಚ ಸರ್ವೈರಹಮೇವ ವೇದ್ಯಃ"** ಎಂದು ಭಗವಂತ ಹೇಳಿದಂತೆ ಹಾಗೂ **"ಸರ್ವೇ ವೇದಾಯತ್ಪದಮಾಮನಂತಿ"** ಇತ್ಯಾದಿ ಪ್ರಮಾಣಗಳಿಂದ ಸಕಲ ವೇದವಾಙ್ಮಯವೂ ಮುಖ್ಯವಾಗಿ ಭಗವಂತನನ್ನೇ ಪ್ರತಿಪಾದಿಸುತ್ತದೆಂಬುದಾಗಿ ಶ್ರೀಮದಾ-ಚಾರ್ಯರು ಪ್ರತಿಪಾದಿಸಿದ್ದಾರೆ.

ಓಂಕಾರ-ವ್ಯಾಹೃತಿ ಮತ್ತು ಗಾಯತ್ರೀ ಮಂತ್ರಗಳಿಂದಲೂ ಪುರುಷಸೂಕ್ತ-ದಿಂದಲೂ ಪ್ರತಿಪಾದ್ಯನಾದ ಶ್ರೀಹರಿಯೇ ಸಕಲ ವೇದಾರ್ಥವೂ ಆಗಿದ್ದಾನೆಂಬುದನ್ನು ಋಗ್ಭಾಷ್ಯವು ಪ್ರತಿಪಾದಿಸುತ್ತದೆ. ಮೊದಲನೇ ಸೂಕ್ತವ್ಯಾಖ್ಯಾನಾನಂತರ ಆಚಾರ್ಯರು ಒಂದು ಅಪೂರ್ವವಾದ ಭೂಮಿಕೆಯನ್ನು ನೀಡಿದ್ದಾರೆ.

"ಯೋ ಹ ವಾ ಽವಿದಿತಾರ್ಷ ಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ ವಾ ಽಧ್ಯಾಪಯತಿ ಸ್ಥಾಣುಂ ವರ್ಛತಿ ಗರ್ತೇ ವಾ ಪದ್ಯತೇ, ಪ್ರವಾಮೀಯತೇ ಪಾಪೀಯಾನ್ ಭವತಿ ತಸ್ಮಾದೇತಾನಿ ಮಂತ್ರೀ ವಿದ್ಯಾತ್" ಎಂದು (ಸಾಮವೇದ ಬ್ರಾಹ್ಮಣ)ದಲ್ಲಿ ಹೇಳಿದಂತೆ ಋಷಿದೇವತಾದಿಗಳ ಪರಿಜ್ಞಾನವಿಲ್ಲದ ವೇದಾಧ್ಯಯನವು ತಾರಕವಾಗುವ ಬದಲು ಮಾರಕವಾಗುತ್ತದೆ.

ಸಕಲ ವಿದ್ಯೆಗಳಿಗೂ ವೇದಗಳಿಗೂ ಪ್ರಧಾನ ದ್ರಷ್ಟಾರ ಮುನಿ ಶ್ರೀಹರಿಯೇ. "ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ" ಎಂದು ಹೇಳಿದಂತೆ, ವೇದವಾಕ್ಯಗಳನ್ನು ಸ್ವತಃ ಸಾಕ್ಷಾತ್ಕರಿಸಿಕೊಳ್ಳುವವರೆಲ್ಲರೂ ಆಯಾ ವೇದಭಾಗಗಳಿಗೆ ಋಷಿಗಳೆನ್ನಿಸಿಕೊಳ್ಳುತ್ತಾರೆ.

## ಉದಾತ್ತಾದಿ ವೇದಸ್ವರಗಳಿಗೆ ವಿಶಿಷ್ಟಾರ್ಥ

ಶ್ರೀಮದಾಚಾರ್ಯರು ವೇದಗಳಲ್ಲಿ ಬರುವ ಉದಾತ್ತಾನುದಾತ್ತಸ್ವರಿತಾದಿ ಸ್ವರಗಳ ವಿಶಿಷ್ಟವಾದ ಅರ್ಥವನ್ನು ವಿವರಿಸಿರುವರು. ವೇದಾಧ್ಯಯನಕ್ಕೆ ಅತ್ಯಂತ ಆವಶ್ಯಕವಾದ ಈ ವಿಚಾರವನ್ನು ಆಚಾರ್ಯರು ಬಹಳ ಸ್ವಾರಸ್ಯವಾಗಿ ವಿವರಿಸಿದ್ದಾರೆ.

**ದಾರ್ಢ್ಯಮೇವಾನುದಾತ್ತಾರ್ಥಃ ಉದಾತ್ತಸ್ಯೋಚ್ಚತಾರ್ಥತಾ ।**
**ನೀಚತಾ ಸ್ವರಿತಸ್ಯಾರ್ಥಃ ಪ್ರಚಯಸ್ಯ ಯಥಾಸ್ಥಿತಿಃ ।**
**ಸಮಾಹಾರೇಽಖಿಲಾ ಅರ್ಥಾಃ ಸ್ವರಾರ್ಥಾನಾಮಿಯಂ ಸ್ಥಿತಿಃ ।**

ವೇದಾಧ್ಯಯನ - ಅಧ್ಯಾಪನ ಫಲಗಳ ತಾರತಮ್ಯವನ್ನು ಋಗ್ಭಾಷ್ಯದಲ್ಲಿ ಆಚಾರ್ಯರು ಚೆನ್ನಾಗಿ ವಿವರಿಸಿರುವರು. ವೇದಾಧ್ಯಯನವು ಅಪರೋಕ್ಷಜ್ಞಾನ ದ್ವಾರಾ ಮೋಕ್ಷಕ್ಕೆ ಸಾಧನ. ಆದರೆ ವೇದಾಧ್ಯಯನದ ಜೊತೆಯಲ್ಲಿ ಋಷ್ಯಾದಿಗಳ (ದ್ರಷ್ಟಾರರ) ಪರಿಜ್ಞಾನ ಅತ್ಯಾವಶ್ಯಕ. ಸ್ವಶಾಖಾಧ್ಯಯನಕ್ಕಿಂತ ಪ್ರವಚನಮಾಡುವುದು ಸಾವಿರ ಪಟ್ಟು ಶ್ರೇಷ್ಠ. ಅರ್ಥವನ್ನು ಚೆನ್ನಾಗಿ ತಿಳಿದುಕೊಳ್ಳುವುದು ಕೋಟಿ ಪಟ್ಟು ಶ್ರೇಷ್ಠ. ಅರ್ಥವನ್ನು ಸ್ಪಷ್ಟವಾಗಿ ಪ್ರತಿಪಾದಿಸುವವನಿಗೆ ಸಿಗುವ ಫಲವಂತೂ ಅನಂತ.

ಹೀಗಿದೆ - ಅನಾದಿಕಾಲದಿಂದಲೂ ಸಕಲರಿಗೂ ಹಿತವನ್ನುಂಟುಮಾಡುವವನಾದ, ಋತ್ವಿಜರ ನಿಯಾಮಕನಾದ, ಹೋತೃವಿನಲ್ಲಿ ಸನ್ನಿಹಿತನಾದ, ಆನಂದಮಯನಾದ, ಕ್ರೀಡಾದಿಗುಣವಿಶಿಷ್ಟನಾದ, ಪ್ರಥಮ ಪೂಜ್ಯನಾದ್ದರಿಂದ ಅಗ್ನಿಯೆಂದು ಕರೆಯಲ್ಪಡುವ ಭಗವಂತನನ್ನು ಸ್ತೋತ್ರ ಮಾಡುತ್ತೇನೆ ಎಂದು. ಹೀಗೆ ಶ್ರೀಮದಾಚಾರ್ಯರು ಅನೇಕ ವಿಧವಾಗಿ ವೈದಿಕ ವಾಙ್ಮಯಕ್ಕೆ ಅಪೂರ್ವವಾದ ಕೊಡುಗೆಯನ್ನು ಸಲ್ಲಿಸಿದ್ದಾರೆ.

## ಶ್ರೀಮದಾಚಾರ್ಯರ ಋಗ್ಭಾಷ್ಯದ ಬಗ್ಗೆ ಬೇರೆ ಗ್ರಂಥಕಾರರ ಹೇಳಿಕೆ

ತ್ರಿವಿಕ್ರಮಪಂಡಿತಾಚಾರ್ಯರು - "ಯಸ್ಯ ಅಸ್ಖಲಿತಾನವರತವೇದಶಾಸ್ತ್ರವ್ಯಾಖ್ಯಾನ ಶ್ರವಣ ಸಮುತ್ಪಾತದುಃಖಸಂಘಾತಃ ನಿಖಿಲಪಂಡಿತವರ್ಗಃ ಪರಮಾಮೃತಸಮುದ್ರಾವಗಾಹೀವ ಬಹುಲಮಾಹ್ಲಾದಮಾಪ್ನೋತಿ"

ಯಾವ ಶ್ರೀಮದಾಚಾರ್ಯರ ಅಸ್ಖಲಿತವಾದ ಸದಾ ವೇದಶಾಸ್ತ್ರ ವ್ಯಾಖ್ಯಾನ ಶ್ರವಣದಿಂದ ದುಃಖವನ್ನು ಕಳೆದುಕೊಂಡ ಸಮಸ್ತ ಪಂಡಿತವರ್ಗವು ಅಮೃತ ಸಮುದ್ರದಲ್ಲಿ ಮುಳುಗಿದಂತೆ ಪರಮಾನಂದವನ್ನು ಅನುಭವಿಸುತ್ತಿದೆ ಎಂದು ಹೇಳಿದ್ದಾರೆ.

"ವೇದಾನಾಮಧ್ಯಾತ್ಮಪರತಾ ನಾಸ್ತೀತಿ ಕೋ ನಾಮ ಬ್ರೂತೇ ಮಧ್ವಭಾಷ್ಯೇಷು ಜಾಗ್ರತ್ಸು" ಎಂದು, ಮಧ್ವಭಾಷ್ಯವು ಜಾಗ್ರತವಾಗಿರಲು ವೇದಗಳಿಗೆ ಅಧ್ಯಾತ್ಮಪರವಾದ ಅರ್ಥಗಳಿಲ್ಲವೆಂದು ಯಾರು ತಾನೆ ಹೇಳಿಯಾರು? ಎಂದು ಕಾಪಾಲಿ ಶಾಸ್ತ್ರಿಗಳು ಉದ್ಗರಿಸಿದ್ದಾರೆ.

## ಶ್ರೀಪದ್ಮನಾಭತೀರ್ಥರು

**ಯಸ್ತ್ರಯೀಸಕಲಪಕ್ಷಶಿಕ್ಷಕಸ್ತತ್ರ ಸಂಸದಿ ವರಿಷ್ಠಸಮ್ಮತಃ ।**
**ಶೋಭನೋಪಪದಭಟ್ಟನಾಮಕಃ ಪೂರ್ಣಸಂಖ್ಯಮನಮನ್ಮುಹುರ್ಮುದಾ ॥**

ಶ್ರೀಮದಾನಂದತೀರ್ಥರ ಸಾಕ್ಷಾಚ್ಛಿಷ್ಯರಾದ ಶ್ರೀಪದ್ಮನಾಭತೀರ್ಥರು ವೇದಗಳಿಗೆ ಸಂಬಂಧಪಟ್ಟ ಸಕಲ ಸಿದ್ಧಾಂತಗಳನ್ನೂ ನಿರ್ಣಯಿಸಿ ಹೇಳುವಲ್ಲಿ ಸಮರ್ಥರಾದವರು. "ಆ ಸಭೆಯಲ್ಲಿ ಇವರೇ ಶ್ರೇಷ್ಠರು" ಎಂದು ಸರ್ವಮಾನ್ಯರಾದವರು. ಶೋಭನಭಟ್ಟರು ಎಂಬ ಪೂರ್ವಾಶ್ರಮನಾಮವುಳ್ಳ ಇವರು ಪರಮಾನಂದದಿಂದ ಶ್ರೀಪೂರ್ಣಪ್ರಜ್ಞಾಚಾರ್ಯರನ್ನು ಪುನಃ ಪುನಃ ಪರಮಭಕ್ತಿಯಿಂದ ನಮಸ್ಕರಿಸಿದರು ಎಂದು ಸುಮಧ್ವವಿಜಯದಲ್ಲಿ ವರ್ಣಿಸಿರುವುದರಿಂದ ಅವರಿಗಿರುವ ಅಪಾರವಾದ ವೇದಜ್ಞಾನ ವ್ಯಕ್ತವಾಗುತ್ತದೆ. (ಸರ್ಗ 9 - ಶ್ಲೋಕ - 17)

**ವೇದಪ್ರವಚನಾಚಾರ್ಯಶಿಷ್ಯೋಽಸಾವಿತಿ ಪೂಜಿತಃ ।**
**ಸಭ್ಯೈಃ ಸಭಾಯಾಂ ಯೋ ವೇದಂ ವ್ಯಾಚಖ್ಯೌ ವೇದಸಾರವಿತ್ ॥**

(ಸು.ವಿ., ಸರ್ಗ 15 ಶ್ಲೋ. 126)

ಸಭಾಭೂಷಣರಾದ, ವೇದಗಳ ಸಾರವನ್ನು ಬಲ್ಲವರಾದ ಶ್ರೀಪದ್ಮನಾಭತೀರ್ಥರ ವೇದವ್ಯಾಖ್ಯಾನ ಕೌಶಲವನ್ನು ನೋಡಿ, "ವೇದಪ್ರವಚನಾಚಾರ್ಯರಾದ ಶ್ರೀಮಧ್ವಾಚಾರ್ಯರ ಶಿಷ್ಯರಿವರು" ಎಂದು ಅವರು ಸಭೆಗಳಲ್ಲಿ ಪೂಜಿತರಾದರು.

## ಶ್ರೀಮಾಧವತೀರ್ಥರು

ಶ್ರೀಮಾಧವತೀರ್ಥರು ಋಗ್ಭಾಷ್ಯದ ಆಧಾರದ ಮೇಲೆ ಚತುರ್ವೇದಗಳಿಗೂ ಭಾಷ್ಯವನ್ನು ಬರೆದು ಆ ಗ್ರಂಥವನ್ನು ವಿಜಯನಗರಕ್ಕೆ ಕಳುಹಿಸಿಕೊಟ್ಟರು. ಅಷ್ಟೇ ಅಲ್ಲದೆ, ಋಗ್ಭಾಷ್ಯವನ್ನು ಅಪೂರ್ಣವಾಗಿ ಬರೆದ ಶ್ರೀಮದಾಚಾರ್ಯರನ್ನು ಟೀಕಿಸುವ ಜನರಿಗೆ ಉತ್ತರರೂಪವಾಗಿ ಈ ಕೆಳಕಂಡ ಪದ್ಯಗಳನ್ನು ಬರೆದು ಕಳುಹಿಸಿದ್ದಾರೆ.

**ರೇ ರೇ ಮಧ್ವಮುನಿಪ್ರಣೀತನಿಗಮವ್ಯಾಖ್ಯಾನಸತ್ಪದ್ಧತಿಂ**
**ಸಂಶ್ರಿತ್ಯೈವ ಸಮಸ್ತವೇದವಿವೃತಿಂ ಕೃತ್ವಾಽದ್ಯ ಸಂದರ್ಶಿತಮ್ ।**

**ಅಲ್ಪೇನಾಪಿ ಮಯಾ ಪರಂ ಕೃತಮಿದಂ ಮಧ್ವಾಂಘ್ರಿರೇಣ್ವಾಶ್ರಯಾತ್**
**ವಕ್ತವ್ಯಂ ಕಿಮಹೋ ಸಮೀರಣಮಹಾಚಾರ್ಯಾಃ ಸಮರ್ಥಾ ಇತಿ ॥**

**ವದಸಿ ವದನಸತ್ವಾತ್ ದೂಷಣಂ ಮಧ್ವಭಾನೌ ।**
**ಜ್ವಲತಿ ನಿಜಜನಾಂಸ್ತ್ವಂ ಮೋಹಯನ್ ಘೂಕಬುದ್ಧೇ ॥**

ಹೇ ಮೂಢನೇ! ಶ್ರೀಮದಾಚಾರ್ಯರು ರಚಿಸಿದ ವೇದವ್ಯಾಖ್ಯಾನದ ಪದ್ಧತಿಯನ್ನು ಅನುಸರಿಸಿ ನಾನು ನಾಲ್ಕು ವೇದಗಳಿಗೂ ಭಾಷ್ಯವನ್ನು ಬರೆದು ನಿಮಗೆ ತೋರಿಸಿದ್ದೇನೆ. ಅಲ್ಪರಾದ ನಮ್ಮಂತಹ ಪಾಮರರೂ ಕೂಡ ಶ್ರೀಮದಾಚಾರ್ಯರ ಪಾದರೇಣುಗಳನ್ನಾಶ್ರಯಿಸಿ ಸಮಸ್ತ ವೇದಗಳಿಗೆ ಸುಂದರವಾದ ವಿವೃತಿಯನ್ನು ಮಾಡಿದ್ದೇವೆಂದಮೇಲೆ ಶ್ರೀಮದಾಚಾರ್ಯರು ಸಮಗ್ರ ಭಾಷ್ಯವನ್ನು ಮಾಡಲು ಸಮರ್ಥರೆಂದು ಹೇಳಬೇಕೇನು?

ಗೂಗೆಯ ಬುದ್ಧಿಯವನೆ! ಬಾಯಿ ಇದೆ ಎಂದು ಭಕ್ತಜನರನ್ನು ಮೋಹಗೊಳಿಸಿ, ಪ್ರಕಾಶಮಾನರಾದ ಆ ಮಧ್ವಸೂರ್ಯರ ಮೇಲೆ ದೋಷಾರೋಪವನ್ನು ಮಾಡುವಿ. ನಾವು ಮಾಡಿರುವ ವೇದವಿವೃತಿಯನ್ನು ಕಂಡಾದರೂ ನಮ್ಮ ಗುರುಗಳ

ಯೋಗ್ಯತೆ ಗೊತ್ತಾಗಲೆಂದು ಇದನ್ನು ಬರೆದು ಕಳಿಸಿದ್ದೇವೆಂದು ಶ್ರೀಮಾಧವ-ತೀರ್ಥರು ಹೇಳಿರುವರು.

## ಶ್ರೀಮಜ್ಜಯತೀರ್ಥರ ಋಗ್ಭಾಷ್ಯಟೀಕಾ

3500 ಗ್ರಂಥಾತ್ಮಕವಾದ (ಒಂದು ಗ್ರಂಥಕ್ಕೆ 32 ಅಕ್ಷರಗಳು) ಈ ಟೀಕೆಗೆ "ಸಂಬಂಧದೀಪಿಕಾ" ಎಂಬ ನಾಮಾಂತರವೂ ಇದೆ. ಶ್ರೀಮದಾಚಾರ್ಯರ ಹಾಗೂ ಯಾಸ್ಕರೇ ಮೊದಲಾದವರ ಗ್ರಂಥಗಳಿಗನುಸಾರವಾಗಿ ಪ್ರಮಾಣಗಳನ್ನು ಉದಾಹರಿಸಿ ವೇದಾರ್ಥವನ್ನು ವಿವರಿಸಿದ್ದಾರೆ. ಪಾಣಿನ್ಯಾಚಾರ್ಯರ ಮತ್ತು ಉಣಾದಿಸೂತ್ರಾ-ಧಾರದ ಮೇಲೆ ವೇದಕ್ಕೆ ಸಂಬಂಧಪಟ್ಟ ಅನೇಕ ಪದಗಳನ್ನು ನಿರ್ವಚನ ಮಾಡಿದ್ದಾರೆ. ಶ್ರೀಟೀಕಾರಾಯರಿಗೆ ವೈದಿಕ ವ್ಯಾಕರಣದ ಮೇಲೆ ಎಂತಹ ಪರಿಣತಿ ಇತ್ತೆಂದು ಇದರಿಂದ ವ್ಯಕ್ತವಾಗುತ್ತದೆ. ಋಗ್ವೇದಕ್ಕೆ ಇತರ ಭಾಷ್ಯಕಾರರು ಮಾಡಿರುವ ಅರ್ಥವನ್ನು ಕೆಲವು ಸಂದರ್ಭಗಳಲ್ಲಿ ಖಂಡಿಸಿದ್ದಾರೆ. ಅಷ್ಟೇ ಅಲ್ಲದೆ, ಮಂತ್ರಗಳಿಗೆ ಆಧ್ಯಾತ್ಮಪರ-ವಾದ ಅರ್ಥವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ.

"ಇಂದ್ರಿಯಾಗ್ನಿಷು ಚಾರ್ಥಾನಾಂ ಇಂದ್ರಿಯಸ್ಥೋಽಗ್ನಿನಾಮಕಃ" ತನ್ನಲ್ಲಿ ತಾನು ಮಾಡುವ ಜ್ಞಾನರೂಪಯಜ್ಞಕ್ಕೆ ಸಂಬಂಧಿಸಿದ್ದು. ಆ ಪರವಸ್ತುವೇ ಹೋತೃ. ಅದು ಇಂದ್ರಿಯಗಳಲ್ಲಿಯೂ ತದ್ವಿಷಯಗಳಲ್ಲಿಯೂ ಇರುವ ಸೌಹಾರ್ದ ಸಂಬಂಧವನ್ನು ನಿಯಮನ ಮಾಡುವ ಒಳಗಿದ್ದು ಪ್ರೇರಕನಾಗಿ ಹೊರಗಿನ ವಸ್ತುಗಳ ಯಥಾರ್ಥ ಜ್ಞಾನರೂಪವಾದ ಆಹುತಿಯಿಂದ ಇಂದ್ರಿಯಾಗ್ನಿಯಲ್ಲಿ ಹೋಮಿಸುವುದು, ಹೋತೃ-ವಾದ ಅಗ್ನಿ ಎಂಬ ಹೆಸರಿನಿಂದ ವೇದ್ಯವಾದುದು, ಎಂಬ ಅರ್ಥವಿವರಣೆಯನ್ನು ನೀಡುವಾಗ ಶ್ರೀಜಯತೀರ್ಥರು ವ್ಯಾಕರಣ ಮತ್ತು ನಿರುಕ್ತನಿಯಮಗಳನ್ನು ಒಂದನ್ನು ಬಿಡದೆ ಹೇಗೆ ಪಾಲಿಸಿಕೊಂಡು ಬಂದಿದ್ದಾರೆಂಬುದನ್ನು ಹಾಗೂ ಋಗ್ಭಾಷ್ಯದ ಮೇಲಿರುವ ಪ್ರೌಢಿಮೆಯನ್ನು ತಮ್ಮ ಟೀಕಾದಲ್ಲಿ ನಿರೂಪಿಸಿದ್ದಾರೆ.

## ಶ್ರೀಟೀಕಾಚಾರ್ಯರು

ಒಬ್ಬ ವ್ಯಕ್ತಿಯಲ್ಲಿ ಒಂದು ಶಬ್ದವು (ಟೀಕಾರಾಯರು) ವಿಶೇಷವಾಗಿ ಪ್ರಸಿದ್ಧ-ವಾಗಬೇಕಾದರೆ, ಆ ಶಬ್ದದ ಅರ್ಥವು ಉಳಿದವರಿಗಿಂತ ಅತ್ಯಧಿಕವಾಗಿರಬೇಕು. ಸೂತ್ರಶಬ್ದವು ಹೇಗೆ ಬ್ರಹ್ಮಸೂತ್ರಗಳಲ್ಲಿಯೇ ಮುಖ್ಯವಾಗಿದೆಯೋ ಅದರಂತೆ ಆಚಾರ್ಯ ಶಬ್ದವು ಶ್ರೀಮದಾಚಾರ್ಯರಲ್ಲಿಯೇ ಮುಖ್ಯವಾಗಿದೆ. ಹಾಗೆಯೇ ಶ್ರೀಟೀಕಾಚಾರ್ಯರು ಎಂಬ ಶಬ್ದವು ಕೇವಲ ಶ್ರೀಜಯತೀರ್ಥರಲ್ಲಿಯೇ ಮುಖ್ಯವಾಗಿದೆ. ಇತರರಿಗೂ ಈ

ಹೆಸರಿನ ಪ್ರಸಕ್ತಿ ಬಂದಾಗ ಪ್ರಾಚೀನರಿಗೆ ಪ್ರಾಚೀನ ಟೀಕಾಕಾರರು ನವೀನರಿಗೆ ಅರ್ವಾಚೀನ ಟೀಕಾಕಾರರು ಎಂಬುದಾಗಿ ಕರೆಯುವುದುಂಟು.

ಟೀಕಾ ಎಂದರೆ ವ್ಯಾಖ್ಯಾನ ವಿಶೇಷ ಎಂದರ್ಥ. ಪದಚ್ಛೇದ, ಪದಾರ್ಥೋಕ್ತಿ, ವಿಗ್ರಹ, ವಾಕ್ಯಯೋಜನೆ, ಆಕ್ಷೇಪಕ್ಕೆ ಸಮಾಧಾನ ಇಷ್ಟು ಲಕ್ಷಣಗಳಿದ್ದರೆ ಅದಕ್ಕೆ ವ್ಯಾಖ್ಯಾನ - ಟೀಕಾ ಎಂಬುದಾಗಿ ಹೇಳುತ್ತಾರೆ. ಮೂಲಗ್ರಂಥಗಳಿಗೆ ಮೇಲೆ ಸೂಚಿಸಿದ ಪಂಚಲಕ್ಷಣಗಳಿಂದ ವ್ಯಾಖ್ಯಾನಿಸಿದರೆ ಅದಕ್ಕೆ ವ್ಯಾಖ್ಯಾನ ಎಂದು ಕರೆಯುವರು. ಟೀಕಾ ಗ್ರಂಥಗಳ - ವ್ಯಾಖ್ಯಾನಗ್ರಂಥಗಳ ಕ್ಲಿಷ್ಟವಾದ ಭಾಗಕ್ಕೆ ಅರ್ಥವಿವರಣೆ ನೀಡಿದರೆ ಅದಕ್ಕೆ 'ಟಿಪ್ಪಣೀ' ಎಂದು ಹೇಳುವರು.

"ಸರ್ವಜ್ಞಕಲ್ಪಾಷ್ಟೀಕಾಕಾರಾಃ" ಎಂಬುದಾಗಿ ಶ್ರೀವ್ಯಾಸರಾಜರು ಶ್ರೀಜಯತೀರ್ಥರನ್ನು ಮುಕ್ತಕಂಠದಿಂದ ಹೊಗಳಿದ್ದಾರೆ.

"ಟೀಕಾಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಃ ಕ್ಷಮಾಃ" ಎಂದು ಶ್ರೀರಾಘವೇಂದ್ರತೀರ್ಥರು "ಟೀಕೆಯ ಗಾಂಭೀರ್ಯವನ್ನು ಉದ್ಧರಿಸಲು ಅಂದರೆ ಟೀಕೆಯ ಅರ್ಥಗಾಂಭೀರ್ಯವನ್ನು ಚೆನ್ನಾಗಿ ವಿವರಿಸಲು ಶ್ರೀವ್ಯಾಸರಾಜರೇ ಮೊದಲಾದವರು ಸಮರ್ಥರು" ಎಂಬುದಾಗಿ ಉದ್ಗಾರ ತೆಗೆದಿದ್ದಾರೆ. (ಮತ್ತು ಟೀಕೆಯ ಪ್ರತಿಪದವು, ಪ್ರತಿವಾಕ್ಯವು ಅನೇಕ ಅರ್ಥಗಳಿಂದ ಕೂಡಿದೆ ಎಂಬುದಾಗಿಯೂ)

ಚಿತ್ರವಾದ ಪದಗಳಿಂದ, ಗಂಭೀರವಾದ ವಾಕ್ಯಗಳಿಂದ, ಖಂಡಿಸಲಾಗದ ಪ್ರಮಾಣಗಳಿಂದ, ಜಗದ್ಗುರುಗಳಾದ ಶ್ರೀಮದಾಚಾರ್ಯರ ಅಭಿಪ್ರಾಯವನ್ನು ಅಭಿವ್ಯಕ್ತಮಾಡುವ ಶ್ರೀಜಯತೀರ್ಥರ ಮಾತು ಶೋಭಿಸುತ್ತಿದೆ.

"ಶ್ರೀಜಯತೀರ್ಥರ ಕೃತಿಗಳಲ್ಲಿ (ಟೀಕೆಗಳಲ್ಲಿ) ಶ್ರವಣಮನನಾದಿಗಳಿಂದ ವಿಶೇಷವಾಗಿ ಭಕ್ತಿಯಿಂದ ಆಸಕ್ತರಾದರೆ ಪುನರ್ಜನ್ಮವೇ ಇಲ್ಲ" ಎಂಬುದಾಗಿ ಶ್ರೀವ್ಯಾಸತತ್ತ್ವಜ್ಞತೀರ್ಥರ ಶಿಷ್ಯರಾದ ಶ್ರೀಅಡವೀ ಸ್ವಾಮಿಗಳು ಹೇಳಿದ್ದಾರೆ.

"ಶ್ರೀಮಧ್ವಃ ಕಲ್ಪವೃಕ್ಷಶ್ಚ ಜಯಾಚಾರ್ಯಾಸ್ತು ಧೇನವಃ" ಎಂಬ ಶ್ಲೋಕದಲ್ಲಿ ಮತ್ತು

**ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ ।**

**ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ ॥** ಎಂಬ ಈ ಚರಮಶ್ಲೋಕದಲ್ಲಿಯೂ ಶ್ರೀಜಯತೀರ್ಥರನ್ನು ಕಾಮಧೇನುವಿನಂತೆ ಕಾಮಿತಾರ್ಥಗಳನ್ನು ಕೊಡುವವರೆಂದು ವರ್ಣಿಸಿದ್ದಾರೆ.

ಶ್ರೀಲಕ್ಷ್ಮೀನಾರಾಯಣಾಚಾರ್ಯರು - ಋಗ್ಭಾಷ್ಯ ಟೀಕಾಟಿಪ್ಪಣಿಯಲ್ಲಿ ಶ್ರೀಜಯತೀರ್ಥರನ್ನು "ಯದ್ವಚೋಽಧೀತ್ಯ ಸರ್ವಜ್ಞಾ ಭವಂತಿ ಭುವನೇ ಜನಾಃ" "ಯಾವ ಟೀಕಾಚಾರ್ಯರ ಗ್ರಂಥಗಳನ್ನು ಓದಿ ಸರ್ವಜ್ಞರಾಗುವರೋ ಅಂತಹ ಜಯತೀರ್ಥರೆಂಬ ಸೂರ್ಯ ನನ್ನ ಹೃದಯದಲ್ಲಿ ಪ್ರಕಾಶಿಸಲೆಂದು" ವರ್ಣಿಸಿರುವರು.

ಶ್ರೀರಾಘವೇಂದ್ರವಿಜಯದಲ್ಲಿ ನಾರಾಯಣಾಚಾರ್ಯರು "ವ್ಯಾಚಷ್ಟ ಪೂರ್ಣಪ್ರಮತಿಪ್ರಣೀತಂ ಸರ್ವಂ ಪ್ರಬಂಧಂ ಸರಸೈರ್ವಚೋಭಿಃ" ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳಿಗೆ ಸರಸವಾದ ವಾಕ್ಯಗಳಿಂದ ವ್ಯಾಖ್ಯಾನ (ಟೀಕಾ) ಮಾಡಿರುವರೆಂದು ವರ್ಣಿಸಿದ್ದಾರೆ.

ವೇದಾರ್ಥಜ್ಞಾನಕ್ಕೆ ಫಲವನ್ನು ಹೇಳಿದೆ. ವೇದವಾದರೂ ಸ್ವರವರ್ಣಾತ್ಮಕವಾದದ್ದು. ವೇದದ ಸ್ವರವಾದರೂ ನಿರರ್ಥಕವಾದದ್ದೆಂದು ಕೆಲವರ ಮತ. ಅದನ್ನು ಶ್ರೀಜಯತೀರ್ಥರು "ದಾರ್ಢ್ಯಮೇವಾನುದಾತ್ತಾರ್ಥ" ಎಂಬ ಋಗ್ಭಾಷ್ಯದ ಟೀಕೆಯಲ್ಲಿ ಸ್ವರಕ್ಕೂ ಪ್ರಯೋಜನವಿದೆ ಎಂದು ಶ್ರೀಜಯತೀರ್ಥರು ಸಮರ್ಥಿಸಿದ್ದಾರೆ.

"ಕ್ರಮಾನ್ನಿಷ್ಫಲತಾಽನ್ಯತ್ರ ಗುರುತತ್ತ್ವೇ ಸಮೀರಿತಾ" ಎಂಬ ಭಾಷ್ಯಕ್ಕೆ 'ಟೀಕಾ' ಬರೆಯುವ ಸಂದರ್ಭದಲ್ಲಿ "ಗುರುತತ್ತ್ವೇ" ಎಂದರೆ ಗುರುತತ್ತ್ವ ಎಂಬ ಗ್ರಂಥದಲ್ಲಿ ಎಂದು ಬರೆದಿದ್ದಾರೆ. ಟೀಕೆ ಇಲ್ಲದೇ ಹೋದರೆ ಈ ಅರ್ಥ ಬೇಗನೇ ಅರ್ಥವಾಗುವುದಿಲ್ಲ.

ಈ ಹಿಂದೆ ಮುದ್ರಿತವಾದ ಭಾಷ್ಯ ಮತ್ತು ಟೀಕಾಗ್ರಂಥಗಳಿಗಿಂತಲೂ ಅಧಿಕಪಾಠ ಮತ್ತು ಶುದ್ಧವಾದ ಪಾಠ ಈ ಸಂಶೋಧನೆಯಲ್ಲಿ ಒದಗಿಸಲಾಗಿದೆ.

ಉದಾಹರಣೆಗೆ - 37ನೇ ಮಂತ್ರದ ಟೀಕಾದಲ್ಲಿ ''सोमस्य द्रवरूपत्वात् आशुत्वम्'' ಎಂಬ ವಾಕ್ಯವು ಈಗ ಮುದ್ರಿತವಾದ ಯಾವ ಗ್ರಂಥದಲ್ಲೂ ಇಲ್ಲ.

70ನೇ ಮಂತ್ರದ ಟೀಕೆಯಲ್ಲಿ ''सर्वत्रास्थितं'' ಎಂಬ ಅಶುದ್ಧಪಾಠವನ್ನು ''विश्वत: सर्वत: सर्वत्र स्थितं'' ಎಂಬುದಾಗಿ ಮೂಲಕೋಶವನ್ನು ನೋಡಿ ಶುದ್ಧೀಕರಿಸಲಾಗಿದೆ.

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ ಟಿಪ್ಪಣಿಗಳ ಶೈಲಿ - ಮಹತ್ವ

ದ್ವೈತಸಿದ್ಧಾಂತದ ಬೆಳವಣಿಗೆಯನ್ನು ನಾವು ಮೂರು ಹಂತಗಳಲ್ಲಿ ಕಾಣಬಹುದು. ಜಗದ್ಗುರುಗಳೆನಿಸಿದ ಶ್ರೀಮದಾಚಾರ್ಯರ ಭಾಷ್ಯ ಮೊದಲನೇ ಹಂತವಾದರೆ,

ಆ ಗ್ರಂಥಗಳಿಗೆ ಟೀಕೆಗಳನ್ನು ಬರೆದ ಶ್ರೀಜಯತೀರ್ಥರ ಟೀಕೆಗಳು ಎರಡನೇ ಹಂತವಾಗಿದೆ. ಆ ಟೀಕೆಗಳಿಗೆ ಬರೆದ ಅನೇಕ ಮಹಾನುಭಾವರ ಟಿಪ್ಪಣಿಗಳು ಮೂರನೇ ಹಂತವಾಗಿವೆ. ಹೀಗೆ ಮೂರು ಹಂತಗಳಾಗಿ ಬೆಳೆದ ಈ ಸಿದ್ಧಾಂತವು ಜಿಜ್ಞಾಸುಗಳಿಗೆ ಉತ್ತಮ ಜ್ಞಾನಧಾರೆಯನ್ನು ಸುರಿಸುತ್ತದೆ.

ಶ್ರೀಜಯತೀರ್ಥರು ತಮ್ಮ ಟೀಕೆಗಳಲ್ಲಿ ಭಾಷ್ಯಾಭಿಪ್ರಾಯವನ್ನು ಸ್ಪಷ್ಟವಾಗಿ ವಿವರಿಸುತ್ತಿದ್ದರೂ ಒಂದೊಂದು ಬಾರಿ ಗ್ರಂಥಗಳ ವಿಸ್ತಾರದ ಭಯದಿಂದ, ಗೂಢಾರ್ಥಗಳುಳ್ಳ ವಾಕ್ಯಗಳನ್ನು ಬಳಸುವುದು ಅನಿವಾರ್ಯವಾಗಿತ್ತು. ಇಂತಹ ಸಂದರ್ಭದಲ್ಲಿ ಟಿಪ್ಪಣಿಗಳ ಸಹಾಯ ಅನಿವಾರ್ಯವಾಗುತ್ತದೆ. ಆದರೆ ಇಂತಹ ಟಿಪ್ಪಣಿಗಳ ಮೂಲಕವೂ ಸ್ಪಷ್ಟವಾಗದೇ ಇದ್ದ ಪ್ರಸಂಗದಲ್ಲಿ ತತ್ತ್ವಜಿಜ್ಞಾಸುಗಳು, ಮಂದಮತಿಗಳು ನೈಜಜ್ಞಾನವನ್ನು ಪಡೆಯದೆ ವಂಚಿತರಾಗಬಹುದು. ಇಂತಹ ಪ್ರಸಂಗದಲ್ಲಿ ಇದಕ್ಕೆ ಅಪವಾದವೆಂಬಂತೆ ಟಿಪ್ಪಣ್ಣಾಚಾರ್ಯ ಚಕ್ರವರ್ತಿಗಳೆಂದು, ಜಗನ್ಮಾನ್ಯರಾದ, ಮಂತ್ರಾಲಯದ ಮುನಿಗಳೆಂದೂ ಪ್ರಸಿದ್ಧರಾದ ಶ್ರೀರಾಘವೇಂದ್ರ ತೀರ್ಥಗುರುಸಾರ್ವಭೌಮರು ಶ್ರೀಜಯತೀರ್ಥರ ಗ್ರಂಥಗಳಿಗೆ ಟಿಪ್ಪಣಿಗಳನ್ನು ಬರೆದು ಪರಮೋಪಕಾರವನ್ನು ಮಾಡಿರುತ್ತಾರೆ.

ಮುನಿತ್ರಯರಲ್ಲಿ ಸೇರಿದ ಶ್ರೀಮದಾಚಾರ್ಯರು ಶ್ರೀಜಯತೀರ್ಥ - ಶ್ರೀವ್ಯಾಸತೀರ್ಥರುಗಳು ಬರೆದ ಗ್ರಂಥಗಳಿಗೆ ಟಿಪ್ಪಣಿಗಳನ್ನು ಬರೆದಿದ್ದಲ್ಲದೇ ಅನೇಕ ಸ್ವತಂತ್ರ ಗ್ರಂಥಗಳನ್ನೂ ರಚಿಸಿ, ಅನಿತರ ಸಾಧಾರಣವಾದ ವಾಙ್ಮಯಸೇವೆಯನ್ನು ಮಾಡಿದ್ದಾರೆ. ಭಾಷ್ಯ - ಟೀಕಾಗ್ರಂಥಗಳ ಪಾಠ-ಪ್ರವಚನ ಮಾಡುವ ಸಂದರ್ಭದಲ್ಲಿ ಶ್ರೀರಾಯರ ಟಿಪ್ಪಣಿ ಸಿಕ್ಕಿತೆಂದರೆ, ವಿದ್ವಾಂಸರ ಸಂತೋಷಕ್ಕೆ ಪಾರವೇ ಇಲ್ಲದಂತಾಗುತ್ತದೆ. ಸಾಮಾನ್ಯ ಬುದ್ಧಿಯುಳ್ಳವರಿಗೂ ಸುಲಭವಾಗುವಂತೆ ಇರುವ ಇವರ ಶೈಲಿಯು ಅತಿ ಸಂಕ್ಷೇಪವೂ ಅತಿ ವಿಸ್ತಾರವೂ ಆಗಿರದೆ ಜಿಜ್ಞಾಸುಗಳಿಗೆ ಉಪಕಾರವಾಗುವ ಏಕೈಕ ದೃಷ್ಟಿಯಲ್ಲಿ ರಚಿತವಾಗಿದೆ.

ನಾವು ಸರ್ವಮೂಲಗ್ರಂಥಗಳನ್ನಾಗಲೀ, ಟೀಕೆಗಳನ್ನಾಗಲೀ ಓದುತ್ತಿರುವಾಗ ಬರಬಹುದಾದ ಸಂದೇಹಗಳನ್ನು ಶ್ರೀರಾಯರು ಊಹಿಸಿ, ಅದಕ್ಕೆ ಉತ್ತರಗಳನ್ನು ಒದಗಿಸಿರುತ್ತಾರೆ. ಅಸಂದೇಹಗಳು ವ್ಯಾಕರಣ, ನ್ಯಾಯ, ಮೀಮಾಂಸಾ ಮುಂತಾದ ಯಾವ ಶಾಸ್ತ್ರಕ್ಕೆ ಸಂಬಂಧಪಟ್ಟದ್ದಾದರೂ ಸರಿ ಅದಕ್ಕೆ ಸರಿಯಾದ ಪ್ರಮಾಣವಾಕ್ಯಗಳನ್ನು ಕೊಟ್ಟು, ಅಧ್ಯೇತೃಗಳ ಅಧ್ಯಯನವು ನಿಲ್ಲದೆ ಮುಂದುವರೆಯುವಂತೆ ಮಾಡುವ ಉತ್ಸಾಹದ ಚಿಲುಮೆ ಇವರ ಟಿಪ್ಪಣಿಗಳು. ಹೀಗಾಗಿ ಇವರು ಇತರ ಟಿಪ್ಪಣೀಕಾರರಿಗೆ ಆದರ್ಶಪ್ರಾಯರಾಗಿದ್ದಾರೆ.

# ಋಗರ್ಥಮಂಜರೀ

ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ ಅನೇಕ ಟಿಪ್ಪಣಿಗಳಲ್ಲಿ 'ಋಗರ್ಥ ಮಂಜರೀ'ಯೂ ಒಂದು. ವೇದತ್ರಯ ವಿವೃತಿ ಎಂಬ ಗ್ರಂಥದ ಮೂಲಕ ಮೂರು ವೇದಗಳಿಗೆ ವ್ಯಾಖ್ಯಾನವನ್ನು ಬರೆದಿದ್ದರೂ, ಋಗ್ವೇದದ ನಲವತ್ತು ಸೂಕ್ತಗಳಿಗೆ ಪ್ರತ್ಯೇಕವಾದ ಒಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ.

ಋಗರ್ಥಮಂಜರೀಯಲ್ಲಿ ಪ್ರಾರಂಭದಲ್ಲಿ ಮಂಗಳಾಚರಣೆ ಪ್ರತಿಜ್ಞೆಯ ನಂತರ ಉಪೋದ್ಘಾತರೂಪದಲ್ಲಿ ಕೆಲವೊಂದು ವಿಚಾರಗಳನ್ನು ತೆಗೆದುಕೊಳ್ಳುತ್ತಾರೆ.

ಸಕಲವೇದಗಳಿಗೆ ಮೂರು ಅರ್ಥಗಳಿವೆ. ಅವುಗಳಲ್ಲಿ ವಿಷ್ಣುಪರವಾದ ಅರ್ಥ-ಗಳನ್ನು ಬಿಟ್ಟು ಉಳಿದೆರಡು ಅರ್ಥಗಳನ್ನೂ ತಿಳಿಯುವುದು ಸುಲಭ. ಅದಕ್ಕಾಗಿ ಸಕಲವೇದಗಳು ವಿಷ್ಣುವನ್ನೇ ಹೇಳುತ್ತವೆಂದು ಹೇಗೆ ಹೇಳುತ್ತೀರಿ ಎಂಬ ಆಕ್ಷೇಪವನ್ನು ಎತ್ತಿಕೊಂಡು "ಓಂ ಇತಿ ಬ್ರಹ್ಮ" ಇತ್ಯಾದಿ ಶ್ರುತಿಗಳು "ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ" ಎಂಬ ಗೀತಾವಾಕ್ಯವು ಓಂಕಾರವು ಪರಬ್ರಹ್ಮನಾದ ವಿಷ್ಣುವಿನ ಹೆಸರೆಂದು ಹೇಳುತ್ತದೆ. ಅದರಂತೆ "ಓಂಕಾರೇಣ ಸರ್ವಾ ವಾಕ್ಸಂತೃಣ್ಣಾ" ಎಂಬ ಛಾಂದೋಗ್ಯೋಪನಿಷತ್ ವಾಕ್ಯವು ಹೇಳಿದಂತೆ ಸಕಲವೇದಗಳು ಓಂಕಾರದ ವ್ಯಾಖ್ಯಾನವೆಂದು ತಿಳಿದು ಬರುತ್ತದೆ. ವ್ಯಾಖ್ಯಾನವು ಮೂಲಗ್ರಂಥಗಳ ವಿಷಯವನ್ನೂ ಪ್ರಸ್ತುತಪಡಿಸಬೇಕಾದ್ದರಿಂದ, ಓಂಕಾರಾರ್ಥವಾದ ಸಕಲವೇದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ ಎಂದು ಹೇಳಿ ವೇದಗಳ ನೈಜಾರ್ಥನಾದ ಭಗವಂತನನ್ನು ತಿಳಿಯಲು ಮೇಲ್ನೋಟದ ಅರ್ಥದ ತಿಳುವಳಿಕೆ ಸಾಲದು. ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದ ತಿಳಿಯಬೇಕು ಎಂದು ಒತ್ತಿ ಹೇಳಿದ್ದಾರೆ.

ಮತ್ತೊಂದೆಡೆ ಹಾಗಾದರೆ ಸಕಲವೇದಗಳ ಶಬ್ದಗಳಿಂದ ಭಗವಂತನೇ ತಿಳಿಯುವುದಾದರೆ ಅವನ ಅನುಗ್ರಹದಿಂದಲೇ ಮೋಕ್ಷವಾಗುತ್ತದೆಯಾದ್ದರಿಂದ ವೇದಗಳ ಇನ್ನೆರಡು ಅರ್ಥಗಳೇಕೆ ಎಂಬ ಪ್ರಶ್ನೆಯನ್ನು ಮಾಡಿಕೊಂಡು ಅದಕ್ಕೆ ಹೀಗೆ ಉತ್ತರಿಸುತ್ತಾರೆ - ಅಗ್ನಿ ಮೊದಲಾದ ಶಬ್ದಗಳಿಗೆ ಕೋಶ-ವ್ಯಾಕರಣಾದಿಗಳಿಂದ ಬೇರೆ ಬೇರೆ ದೇವತಾಪರವಾದ ಅರ್ಥವು ದೊರೆಯುತ್ತಿದ್ದಾಗ ಶಾಸ್ತ್ರಸಮ್ಮತವಾದ ಅರ್ಥ-ಗಳನ್ನು ಬಿಡಬಾರದು. ಅಲ್ಲದೇ ಭಗವಂತನ ಪರಿವಾರ ದೇವತೆಗಳೆಂದು ಅವರ ಉಪಾಸನೆಯನ್ನು ಮಾಡಬೇಕಾದುದು ಶಾಸ್ತ್ರಸಮ್ಮತವಾಗಿದೆ.

ಈ ರೀತಿಯಾಗಿ ತಮ್ಮ ಉಪೋದ್ಘಾತ ಪ್ರಕರಣವನ್ನು ಮುಗಿಸಿ ಸೂಕ್ತ-ವ್ಯಾಖ್ಯಾನಾರಂಭದಲ್ಲಿ ಹೀಗೆ ಪ್ರತಿಜ್ಞೆ ಮಾಡುತ್ತಾರೆ -

**ಋಷಿಛಂದೋದೇವತೋಕ್ತಿಪದಾರ್ಥಾನ್ವಯಪೂರ್ವಕಮ್ ।**
**ಮಂತ್ರಾರ್ಥಸಂಗ್ರಹಂ ಕುರ್ಮೋ ಬಾಲಾನಾಂ ಬೋಧಸಿದ್ಧಯೇ ॥**

ವೇದವಾಕ್ಯಗಳಿಗೆ ಋಷಿ-ಛಂದಸ್ಸು-ದೇವತಾದಿಗಳನ್ನು ಹೇಳಿ, ಪ್ರತಿಯೊಂದು ಪದಗಳಿಗೆ ಅನ್ವಯ ಪ್ರದರ್ಶನ ಮಾಡುತ್ತಾ ಮಂತ್ರಗಳ ಅರ್ಥಸಂಗ್ರಹವನ್ನು ಮಾಡುತ್ತೇವೆಂದು ಹೇಳುತ್ತಾರೆ.

ಮೊದಲನೇ ಸೂಕ್ತಕ್ಕೆ ಗಾಯತ್ರೀ ಛಂದಸ್ಸು ಅಗ್ನಿ ಮತ್ತು ಅಂತರ್ಗತನಾದ ವಿಷ್ಣುದೇವತೆ ಎಂದು ವಿವರಣೆಯನ್ನು ಕೊಟ್ಟು, ಸೂಕ್ತವೆಂದರೇನು ? ಎಂಬ ಪ್ರಶ್ನೆಗೆ ವಿವರಣೆಯನ್ನು ಕೊಡುತ್ತಾರೆ.

"वेदस्य मूलवेदोपवेदावान्तरवेदरूपेण त्रैविध्यान्मूलवेदे ऋचां यः क्रमस्तत्रर्चोन्तरिताः कृत्वा यावत्पाठितं तावदुपवेदे सूक्तमुच्यते ।..........."

ಮೂಲವೇದ - ಉಪವೇದ - ಅವಾಂತರವೇದವೆಂದು ವೇದವು ಮೂರು ವಿಧ. ಮೂಲವೇದದ ಕ್ರಮದಲ್ಲಿ ಮಧ್ಯ ಬಿಡದೇ ಪಠಿಸಲಾದ ಋಕ್ಕುಗಳನ್ನು ಉಪವೇದದಲ್ಲಿ ಸೂಕ್ತವೆನ್ನುತ್ತಾರೆ. ಉಪವೇದದಲ್ಲಿರುವ ಸೂಕ್ತಾಂತರ್ಗತ ಋಕ್ ಪ್ರಬಂಧವನ್ನು ಅವಾಂತರ ವೇದದಲ್ಲಿ ಸೂಕ್ತವೆನ್ನುತ್ತಾರೆ. ಇದಕ್ಕೆ

"सूक्तं त्वनारतं प्रोक्तं"

ಎಂಬ ಋಗ್ಭಾಷ್ಯದ ವಾಕ್ಯವನ್ನು ಪ್ರಮಾಣೀಕರಿಸುತ್ತಾರೆ.

## ವ್ಯಾಕರಣ ವಿಶೇಷ

ರತ್ನಧಾತಮಮ್ ಎಂಬ ಒಂದು ಶಬ್ದದ ನಿಷ್ಪತ್ತಿ ಪ್ರದರ್ಶನ ಪ್ರಸಂಗದಲ್ಲಿ -

रमेः औणादिके क्त्न प्रत्यये "लशक्वतद्धिते" इति ककार लोपे "अनुदात्तो.......... झलि किति" इति धातोर्मकारलोपे "रत्न" इतिरूपत्वाद्रत्नं धत्त इति रत्नधाः डुधाञ्धारणपोषणयोः इत्यतः "आतो मनिन्क्वब्वनिपश्च" इति चद्विच्प्रत्यये रूपत्वात्, अतिशयेन रत्नधा रत्नधातमः तं रत्नधातमम् ।

ಇಷ್ಟು ವಿವರಣೆಯನ್ನು ಕೊಟ್ಟು ಅನಂತ ಸುಖವುಳ್ಳವನು ಎಂದು 'ರತ್ನಧಾತಮಮ್' ಎಂಬ ಶಬ್ದಕ್ಕೆ ಅರ್ಥವನ್ನು ಹೇಳುತ್ತಾರೆ. ಹೀಗೆ ಪ್ರತಿಯೊಂದು

ವಿಚಾರದಲ್ಲಿ ಸ್ಪಷ್ಟ ನಿಲುವನ್ನು ಪ್ರಕಟಿಸುತ್ತಾ ಪರಮೋಪಕಾರವನ್ನು ಮಾಡಿದ್ದಾರೆ. ಹೀಗೆ ವೇದಮಂತ್ರಗಳಿಗೆ ವಿಶಿಷ್ಟವಾದ ಅರ್ಥಗಳನ್ನು ವರ್ಣಿಸಿದ ಶ್ರೀರಾಘವೇಂದ್ರ ತೀರ್ಥಗುರುಸಾರ್ವಭೌಮರ ಈ ಗ್ರಂಥವನ್ನು ಕುರಿತು ಕೇವಲ ಮಾಧ್ವರಲ್ಲದೇ ಮಾಧ್ವೇತರರೂ ಕೂಡಾ ತುಂಬುಹೃದಯದಿಂದ ಸ್ವಾಗತಿಸಿದ್ದಾರೆ.

ಋಗ್ವೇದ ಭಾಷ್ಯ ಭೂಮಿಕೆಯನ್ನು ಸಂಪಾದಿಸಿದ ಕಾಪಾಲಿಕ ಶಾಸ್ತ್ರಿಗಳು "ಮಧ್ವಮತಾವಲಂಬಿಗಳಾದ ಯೋಗಿಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರು ಮಧ್ವಭಾಷ್ಯವನ್ನು ಅನುಸರಿಸಿ ವಿವರಣೆಯನ್ನು ಕೊಡುತ್ತಾ ಮಂತ್ರಾರ್ಥಮಂಜರೀ ಎಂಬ ವ್ಯಾಖ್ಯಾನವನ್ನು ಮಾಡಿದ್ದಾರೆ. ಮಂತ್ರಗಳನ್ನು ಅಗ್ನ್ಯಾದಿದೇವತಾಪರ-ವಾಗಿಯೂ, ತದಂತರ್ಗತ ಪರದೇವತೆಯಾದ ವಿಷ್ಣುಪರವಾಗಿಯೂ ವ್ಯಾಖ್ಯಾನ-ವನ್ನೂ ಮಾಡಬೇಕಲ್ಲವೆ? ಆದರೆ ನಾವು ಅವರು ಬರೆದ ತ್ರಿವಿಧಾರ್ಥಗಳು ಸರಿಯೋ ತಪ್ಪೋ ಎಂದು ವಿಮರ್ಶೆಗೆ ಹೋಗುವುದಿಲ್ಲ. ಆದರೆ ಇಲ್ಲಿ ವೇದವಾಕ್ಯಗಳಿಗೆ ಮೂರು ಅರ್ಥಗಳು ಅವರು ಹೇಗೆ ಹೇಳಿದ್ದಾರೆಂದು ಸಂಕ್ಷೇಪವಾಗಿ ಹೋಗುತ್ತೇವೆ. ಅವಶ್ಯವಿದ್ದ ಸ್ಥಳಗಳಲ್ಲಿ ಅವರ ವಾಕ್ಯಗಳನ್ನೇ ನೇರವಾಗಿ ಕೊಡುತ್ತೇವೆ."

तदनुसारिणा महानुभावेन श्रीराघवेन्द्रस्वामिना योगीन्द्रेण आचार्यस्य भाष्यमनुसृत्याशयान् विशदयन्ती मन्त्रार्थमञ्जरी नाम व्याख्या निबद्धा । अग्न्यादिदेवतापरतया तदन्तर्गत परदेवताभूत विष्णुपरतया आध्यात्मपरतया च ऋचो व्याख्येया: किल । यद्यपि तदुक्त त्रिविधार्थप्रकार परीक्षायै न वयं प्रवृत्ता: स्म: तथाऽपि कथमर्थत्रयं ऋचां सिध्यति अस्मिन्नर्थाविष्कारनय इति समासतो ब्रूम: । आवश्यक स्थलेषु मन्त्रार्थमञ्जरी वाक्यान्येव उद्धृत्योदाहरिष्याम: ।

– ऋग्वेदभाष्यभूमिका

ಚತುರಧಿಕ ಶತಗ್ರಂಥಕರ್ತೃಗಳಾದ ಶ್ರೀವಿಜಯೀಂದ್ರತೀರ್ಥರು ಋಗ್ಭಾಷ್ಯ-ಟೀಕಾಟಿಪ್ಪಣಿಯನ್ನು ರಚಿಸಿರುವರೆಂದು ಪ್ರತೀತಿ. ಶ್ರೀಸುಮತೀಂದ್ರತೀರ್ಥರು "ಋಗ್ಭಾಷ್ಯಟೀಕಾಭಾವರತ್ನಕೋಶ" ಎಂಬ ಟಿಪ್ಪಣಿಯನ್ನು ರಚಿಸಿರುವರು. ಶ್ರೀಭುವನೇಂದ್ರ-ತೀರ್ಥರು ಶ್ರೀಮದಾಚಾರ್ಯರ ಋಗ್ಭಾಷ್ಯದ 40 ಸೂಕ್ತಗಳನ್ನು ಹೊರತುಪಡಿಸಿ, ಸಮಗ್ರ ಋಗ್ವೇದಕ್ಕೆ ವ್ಯಾಖ್ಯಾನವನ್ನು ರಚಿಸಿರುವರೆಂದು ಪ್ರತೀತಿ.

ಋಕ್‌ಪ್ರಸ್ಥಾನಕ್ಕೆ ಸಂಬಂಧಪಟ್ಟ ಟೀಕಾ-ಟಿಪ್ಪಣಿಗಳು

| | | | |
|---|---|---|---|
| 1. | ಋಗ್ವ್ಯಾಖ್ಯಾನ | - | ಶ್ರೀಮಾಧವತೀರ್ಥರು |
| 2. | ಋಗ್ಭಾಷ್ಯಟೀಕಾ (ಸಂಬಂಧದೀಪಿಕಾ) | - | ಶ್ರೀಜಯತೀರ್ಥರು |
| 3. | ಋಗ್ಭಾಷ್ಯಟಿಪ್ಪಣೀ | - | ಶ್ರೀವಿಜಯೀಂದ್ರತೀರ್ಥರು |
| 4. | ಋಗರ್ಥ(ಮಂತ್ರಾರ್ಥ)ಮಂಜರೀ | - | ಶ್ರೀರಾಘವೇಂದ್ರತೀರ್ಥರು |
| 5. | ಋಗ್ಭಾಷ್ಯಟಿಪ್ಪಣೀ (ಶಿಷ್ಯವಾಕ್ಯಾರ್ಥದೀಧಿತಿ) | - | ಶ್ರೀಲಕ್ಷ್ಮೀ ನಾರಾಯಣಾಚಾರ್ಯರು |
| 6. | ಋಗ್ಭಾಷ್ಯಟಿಪ್ಪಣೀ (ಭಾವರತ್ನಕೋಶ) | - | ಶ್ರೀಸುಮತೀಂದ್ರತೀರ್ಥರು |
| 7. | ಋಗ್ಭಾಷ್ಯಟಿಪ್ಪಣೀ | - | ಶ್ರೀಭುವನೇಂದ್ರತೀರ್ಥರು |
| 8. | ಋಗ್ಭಾಷ್ಯಟಿಪ್ಪಣೀ (ವಾಕ್ಯಾರ್ಥದೀಧಿತಿ) | - | ಶ್ರೀವಿದ್ಯಾಧೀಶತೀರ್ಥರು |
| 9. | ಋಗ್ಭಾಷ್ಯಟಿಪ್ಪಣೀ (ಶಿಷ್ಯವಾಕ್ಯಾರ್ಥದೀಧಿತಿ) | - | ಶ್ರೀಕೇಶವಾಚಾರ್ಯ ಪಾಂಡುರಂಗಿ |
| 10. | ಋಗ್ಭಾಷ್ಯಟಿಪ್ಪಣೀ | - | ಶ್ರೀವಂಶಪಲ್ಲಿ ಆಚಾರ್ಯರು |
| 11. | ಋಗ್ಭಾಷ್ಯಟಿಪ್ಪಣೀ | - | ಶ್ರೀಕಂಬಾಲೂರು ರಾಮಚಂದ್ರತೀರ್ಥರು |
| 12. | ಋಗ್ಭಾಷ್ಯಟಿಪ್ಪಣೀ | - | ಶ್ರೀಜಗನ್ನಾಥತೀರ್ಥರು |
| 13. | ಋಗ್ಭಾಷ್ಯಟಿಪ್ಪಣೀ | - | ಶ್ರೀಸತ್ಯನಾಥತೀರ್ಥರು |
| 14. | ಋಗ್ಭಾಷ್ಯಟಿಪ್ಪಣೀ | - | ಶ್ರೀಛಲಾರಿ ನರಸಿಂಹಾಚಾರ್ಯರು |
| 15. | ಋಗ್ಭಾಷ್ಯಟಿಪ್ಪಣೀ | - | ಆರೋಗ್ಯನಾಮಕಹರಿ (ನರಸಿಂಹಾಚಾರ್ಯರ ಪುತ್ರ) |
| 16. | ಋಕ್ಸಂಹಿತಾಭಾಷ್ಯಂ | - | ಶ್ರೀಮುದ್ಗಲಾಚಾರ್ಯರು |
| 17. | ಋಗ್ಭಾಷ್ಯಟಿಪ್ಪಣೀ | - | ಶ್ರೀವರಾಹಾಚಾರ್ಯರು |
| 18. | ಋಗ್ಭಾಷ್ಯವ್ಯಾಖ್ಯಾ | - | ಶ್ರೀವಿಠಲಾಚಾರ್ಯರು |
| 19. | ಋಗ್ಭಾಷ್ಯಟಿಪ್ಪಣೀ | - | ಹರಿದಾಸಾಚಾರ್ಯರು |
| 20. | ಋಕ್ಸಂಹಿತಾಭಾಷ್ಯಂ | - | ಗೂಢಕರ್ತೃಕ |
| 21. | ಋಗ್ಭಾಷ್ಯಟಿಪ್ಪಣೀ (ಪ್ರಕ್ರಿಯಾ ಕೌಮುದೀ) | - | ವರಖೇಡಿ ಕೃಷ್ಣಾಚಾರ್ಯರು |

# ಲಕ್ಷ್ಮೀನಾರಾಯಣಾಚಾರ್ಯರ ಪರಿಚಯ

ವ್ಯಾಖ್ಯಾಕರ್ತೃಗಳಾದವರ ಬಗ್ಗೆ ತಿಳಿಯುವುದು ಗ್ರಂಥಾಧ್ಯಯನ ಮಾಡುವವರ ಕರ್ತವ್ಯವಾಗಿದೆ. ಈ ನಿಟ್ಟಿನಲ್ಲಿ ವ್ಯಾಖ್ಯಾಕರ್ತೃಗಳಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರ ಬಗ್ಗೆ ಕಿರುಪರಿಚಯವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಗೌತಮ ವಂಶದಲ್ಲಿ 'ಅರವತ್ತು ಒಕ್ಕಲಿನ', 'ಬೀಗಮುದ್ರೆ' ಹೆಸರಿನಿಂದ ಕರೆಯಲ್ಪಡುವ ಒಂದು ಮನೆತನದವರಾದ, ಶಾಸ್ತ್ರ-ಸಂಗೀತ ಮುಂತಾದ ಕಲೆಗೆ ಪ್ರಸಿದ್ಧರಾದ ಇವರು ಈ ವಂಶದಲ್ಲಿ ಹುಟ್ಟಿಬಂದಿರುವರು.

ವೀಣಾ ಕಲೆಯಲ್ಲಿ ನಿಪುಣರಾದ ಈ ವಂಶದವರು ರಾಜಾಧಿರಾಜರುಗಳಿಗೆ ತಮ್ಮ ಕಲೆಯನ್ನು ಬೋಧಿಸಿ, ಅನೇಕ ಗೌರವಾದರಗಳನ್ನು ಪಡೆದಿದ್ದರು. ಅವರಲ್ಲಿ ಪ್ರಸಿದ್ಧರಾದವರು ವೀಣಾ ಕೃಷ್ಣಭಟ್ಟರು. ಅವರ ಮಕ್ಕಳು ವೀಣಾ ಕನಕಾಚಲಭಟ್ಟರು. ಅವರ ಮಕ್ಕಳು ವೀಣಾ ತಿಮ್ಮಣ್ಣಭಟ್ಟರು. ಇವರು ವಿಜಯನಗರದ ಕೃಷ್ಣದೇವರಾಯನಿಗೆ ವೀಣಾವಿದ್ಯೆಯನ್ನು ಬೋಧಿಸಿ, ಘನವಾದ ಮುತ್ತಿನಹಾರವೇ ಮೊದಲಾದ ಬಹುಮಾನಗಳಿಂದ ಮನ್ನಣೆಯನ್ನು ಪಡೆದಿದ್ದರು. ತಿಮ್ಮಣ್ಣಭಟ್ಟರ ಪತ್ನಿ ಗೋಪಿಕಾಂಬಾ, ಈ ದಂಪತಿಗಳಿಗೆ ವೆಂಕಟಾಂಬಾ ಎಂಬ ಮಗಳು ಗುರುರಾಜಾಚಾರ್ಯ ಮತ್ತು ವೆಂಕಟನಾಥಾಚಾರ್ಯರೆಂಬ ಇಬ್ಬರು ಗಂಡುಮಕ್ಕಳಿದ್ದರು. ಇವರಲ್ಲಿ ಕಿರಿಯವರಾದ ವೆಂಕಟನಾಥಾಚಾರ್ಯರೇ ಮುಂದೆ ಹಂಸನಾಮಕ ಪರಮಾತ್ಮನ ಪರಂಪರೆಯಲ್ಲಿ ಬಂದ ಶ್ರೀಸುಧೀಂದ್ರತೀರ್ಥರಿಂದ ಸನ್ಯಸ್ತರಾಗಿ ಶ್ರೀರಾಘವೇಂದ್ರತೀರ್ಥರೆಂದು ಪ್ರಸಿದ್ಧರಾಗಿದ್ದಾರೆ.

ಶ್ರೀವೆಂಕಟನಾಥಾಚಾರ್ಯರಿಗೆ ಸರಸ್ವತಿಯೆಂಬ ಕನ್ಯೆಯೊಡನೆ ವಿವಾಹವಾಯಿತು. ಅವರಿಗೆ ದೈವಾನುಗ್ರಹದಿಂದ ಶ್ರೀಲಕ್ಷ್ಮೀನಾರಾಯಣಾಚಾರ್ಯರೆಂಬ ಪುತ್ರರಿದ್ದರು. ಅವರೇ ಪ್ರಕೃತ ವ್ಯಾಖ್ಯಾಕರ್ತೃಗಳು.

ತಂದೆಯಿಂದ ಬಾಲ್ಯದಲ್ಲಿ ಉಪನಯನ ಸಂಸ್ಕಾರವನ್ನು ಪಡೆದರು. ತಂದೆಯವರಾದ ವೆಂಕಟನಾಥಾಚಾರ್ಯರಿಗೆ ಶ್ರೀಸುಧೀಂದ್ರತೀರ್ಥರಿಂದ ಮೂಲಮಹಾಸಂಸ್ಥಾನಾಧಿಪತ್ಯವು ಲಭಿಸಿದ್ದರಿಂದ ಅನಿವಾರ್ಯವಾಗಿ ಲಕ್ಷ್ಮೀನಾರಾಯಣಾಚಾರ್ಯರು ದೊಡ್ಡಪ್ಪಂದಿರಾದ ಗುರುರಾಜಾಚಾರ್ಯರಲ್ಲಿ ಬೆಳೆಯುವ ಪ್ರಸಂಗ ಬಂದಿತು.

ಮಹಾಮೇಧಾವಿಗಳಾದ ಗುರುರಾಜಾಚಾರ್ಯರು ಲಕ್ಷ್ಮೀನಾರಾಯಣಾಚಾರ್ಯರಿಗೆ, ವೇದಾಧ್ಯಯನದ ಜೊತೆಯಲ್ಲಿ ಕಾವ್ಯನಾಟಕ-ಕೋಶಗಳ ಪರಿಚಯವನ್ನು ಮಾಡಿಕೊಟ್ಟರು.

ಮನೆತನದ ವೀಣಾವಿದ್ಯೆಯನ್ನು ಬೋಧಿಸಿದರು. ಭಾಷಾವ್ಯುತ್ಪನ್ನರಾದ ಇವರನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರಲ್ಲಿ ಕಳುಹಿಸಿ-ಕೊಟ್ಟರು. ನಂತರ ಪೂಜ್ಯಗುರುಗಳಿಂದ ಇವರು ವ್ಯಾಕರಣ - ತರ್ಕ - ಮೀಮಾಂಸಾ - ವೇದಾಂತ ಮುಂತಾದ ಶಾಸ್ತ್ರಗಳಲ್ಲಿ ಆಳವಾದ ಪಾಂಡಿತ್ಯವನ್ನು ಪಡೆದರು. ಶ್ರೀರಾಘವೇಂದ್ರತೀರ್ಥರು ರಚಿಸಿದ ಗ್ರಂಥಗಳ ಪಾಠವನ್ನು ಅವರ ವಾಣಿಯಿಂದ ಕೇಳುವ ಸೌಭಾಗ್ಯ ಇವರದಾಗಿತ್ತು. ಹೀಗಾಗಿ ಶ್ರೀರಾಘವೇಂದ್ರತೀರ್ಥರ. ಅನೇಕ ಗ್ರಂಥಗಳಿಗೆ ಇವರು ವ್ಯಾಖ್ಯಾನವನ್ನು ಬರೆದಿದ್ದಾರೆ.

## ಇವರು ರಚಿಸಿದ ಉಪಲಬ್ಧ ಗ್ರಂಥಗಳು

1. ಶ್ರೀರಾಮಚಾರಿತ್ರ್ಯಮಂಜರೀ ವ್ಯಾಖ್ಯಾನ
2. ಶ್ರೀಕೃಷ್ಣಚಾರಿತ್ರ್ಯಮಂಜರೀ ವ್ಯಾಖ್ಯಾನ
3. ಶ್ರೀಮಹಾಭಾರತತಾತ್ಪರ್ಯನಿರ್ಣಯ ಭಾವಸಂಗ್ರಹ ವ್ಯಾಖ್ಯಾನ
4. ಋಗ್ಭಾಷ್ಯಟೀಕಾಟಿಪ್ಪಣೀ

## ಋಗ್ಭಾಷ್ಯಟೀಕಾಟಿಪ್ಪಣೀ

ಪ್ರಕೃತ ಈ ಗ್ರಂಥವು ಶ್ರೀಮದಾಚಾರ್ಯರ ಋಗ್ಭಾಷ್ಯಕ್ಕೆ ಶ್ರೀಜಯತೀರ್ಥರ ಟೀಕಾ - ಟೀಕೆಗೆ ಶ್ರೀಲಕ್ಷ್ಮೀನಾರಾಯಣಾಚಾರ್ಯರು ಟಿಪ್ಪಣಿಯನ್ನು ಬರೆದಿರುತ್ತಾರೆ.

ಗುರುಗುಣಸ್ತವನಕಾರರಾದ ಶ್ರೀವಾದೀಂದ್ರತೀರ್ಥರು ತಮ್ಮ ಗುರುಗುಣ-ಸ್ತವನದಲ್ಲಿ ಶ್ರೀರಾಯರ ಋಗರ್ಥಮಂಜರೀಯನ್ನು ವರ್ಣಿಸುವ ಪ್ರಸಂಗದಲ್ಲಿ ಹೀಗೆ ಹೇಳುತ್ತಾರೆ -

**ಲಕ್ಷ್ಮೀನಾರಾಯಣಾರ್ಯಸ್ತವತನಯಮಣಿಃ ಸತ್ಸು ಸರ್ವೇಷು ಧನ್ಯೋ**
**ಯಸ್ಮಾದೃಗ್ಭಾಷ್ಯಟೀಕಾತನುತರವಿವೃತೇರಂಜಸಾ ತತ್ಕೃತಾಯಾಃ ।**
**ಪ್ರೇಮ್ಣಾ ವಿದ್ವತ್ಸು ಭೂಯಃ ಪ್ರಚಯಮಭಿಲಷನ್ ರಾಘವೇಂದ್ರವ್ರತೀಂದ್ರ**
**ಪ್ರಾಪ್ತೋಽಚಸ್ತ್ವಂ ಪ್ರತೀತವ್ರತಚನಿಚಯಮೃಚಾಮೇವ ಭಾಷ್ಯಾನುರೋಧಾತ್ ॥**

- ಗುರುಗುಣಸ್ತವನ-27

ಹೇ ರಾಘವೇಂದ್ರಗುರುಗಳೇ! "ಪ್ರತೀತವ್ರತ" ಎಂದರೆ ಮಧ್ವಶಾಸ್ತ್ರವನ್ನು ಟೀಕಾಟಿಪ್ಪಣಿಗಳ ಮೂಲಕ ವ್ಯಾಖ್ಯಾನಿಸುತ್ತೇವೆಂಬ ನಿಯಮವುಳ್ಳ ನೀವು ಋಗ್ಭಾಷ್ಯದ ಟೀಕೆಗೆ ವ್ಯಾಖ್ಯಾನವನ್ನು ಮಾಡುವುದು ಬಿಟ್ಟು ನೇರವಾಗಿ ಋಙ್ಮಂತ್ರಗಳಿಗೆ

ವ್ಯಾಖ್ಯಾನವನ್ನು ಮಾಡಿ ಒಂದು ಚಿಕ್ಕ ಗ್ರಂಥವನ್ನು ಬರೆದಿದ್ದೀರಿ. ಏಕೆಂದರೆ, ತಮ್ಮ ಪುತ್ರರಾದ ಲಕ್ಷ್ಮೀನಾರಾಯಣಾಚಾರ್ಯರು ಬರೆದ ಋಗ್ಭಾಷ್ಯಟೀಕಾಟಿಪ್ಪಣಿಯು ಬೇಗನೇ ಪಂಡಿತಮಂಡಳಿಯಲ್ಲಿ ಪ್ರಚಾರಕ್ಕೆ ಬರಲಿ ಎಂಬ ಸದುದ್ದೇಶ್ಯದಿಂದ ಇರಬಹುದು. ಇಂತಹ ನಿಮ್ಮ ಅನುಗ್ರಹಕ್ಕೆ ಪಾತ್ರರಾದ ಶ್ರೀಲಕ್ಷ್ಮೀನಾರಾಯಣಾ-ಚಾರ್ಯರೇ ಧನ್ಯರು ಎಂದು ಭಾವ.

ಇಲ್ಲಿ ಶ್ರೀರಾಘವೇಂದ್ರತೀರ್ಥರು ಸನ್ಯಸ್ತರಾದ ಮೇಲೆಯೂ ಮಗನ ಗ್ರಂಥವು ಲೋಕದಲ್ಲಿ ಪ್ರಸಿದ್ಧಿಗೆ ಬರಲಿ ಎಂದು ಬಯಸಿದ್ದು ಸರಿಯೇ ಎಂಬ ಪ್ರಶ್ನೆಯು ಸಹಜವಾಗಿ ಮೂಡುತ್ತದೆ. ಅದಕ್ಕೆ ಎರಡು ಬಗೆಯಾಗಿ ಉತ್ತರಿಸಬಹುದು.

1. ಶಾಸ್ತ್ರಪಾಂಡಿತ್ಯ ಯಾರಲ್ಲಿದ್ದರೂ ಸರಿ ಅದು ಪ್ರಚಾರಕ್ಕೆ ತರುವುದು ಎಲ್ಲರಿಗೂ ವಿಹಿತವಾದ ಧರ್ಮವೇ ಆಗಿದೆ. ಲೌಕಿಕವಾದ ಕೀರ್ತಿ ಮಗನಿಗೆ ಬರಲಿ ಎಂಬ ಉದ್ದೇಶ್ಯ ಮಾತ್ರವಿರಬಾರದು.

2. ಮಕ್ಕಳು ಏಳು ವಿಧವಾಗಿರುತ್ತಾರೆಂದು ಒಂದು ಸ್ಮೃತಿವಚನದಿಂದ ತಿಳಿಯುತ್ತದೆ.

**ವರಜೋ ವೀರ್ಯಜಶ್ಚೈವ ಕ್ಷೇತ್ರಜಃ ಪಾಲಕಸ್ತಥಾ ।**
**ವಿದ್ಯಾಮಂತ್ರಸುತೌ ಚೈವ ಗೃಹೀತಃ ಸಪ್ತಮಃ ಸುತಃ ॥**

ಏಳು ಪುತ್ರರಲ್ಲಿ ಶಾಂತಿಪುರಸ್ಸರವಾಗಿ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮ-ರಲ್ಲಿ ವಿದ್ಯಾಭ್ಯಾಸ ಮಾಡಿದ್ದರಿಂದ ವಿದ್ಯಾಪುತ್ರರಾಗಿಯೂ ಗುರುಗಳ ಮೂಲಕ ಮಂತ್ರೋಪದಿಷ್ಟರಾದ್ದರಿಂದ ಮಂತ್ರಪುತ್ರರಾಗಿಯೂ ಲಕ್ಷ್ಮೀನಾರಾಯಣಾಚಾರ್ಯರು ಪ್ರಸಿದ್ಧರಾಗಿದ್ದಾರೆಂದು ತಿಳಿಯಬೇಕು.

## ಋಗ್ಭಾಷ್ಯಟೀಕಾಟಿಪ್ಪಣೀ

1. ಒಂದು ಪದಕ್ಕೆ ಅನೇಕ ಅರ್ಥಗಳನ್ನು ಹೇಳುವುದು ಒಂದು ವಿಶೇಷ.
2. ತೃಚಶಬ್ದನಿಷ್ಪತ್ತಿಪ್ರಕಾರವನ್ನು – तिस्रः ऋचो यस्मिन् समुदाये स तृच इत्यर्थः ಎಂಬುದಾಗಿ ಹೇಳುತ್ತಾ, ಇದರ ವಿವರಣೆಯನ್ನು "अग्नेयं यज्ञमध्वरं" ಎಂಬ ಮಂತ್ರದ ವ್ಯಾಖ್ಯಾನದಲ್ಲಿ ಉಪಪಾದಿಸಿದ್ದೇವೆ. ಅದನ್ನು ಅಲ್ಲಿಯೇ ನೋಡಿ ತಿಳಿದುಕೊಳ್ಳಿ ಎಂದು ಬರೆದಿದ್ದಾರೆ. ಇದು ಶ್ರೀರಾಯರ ಶೈಲಿಯನ್ನು ಹೋಲುತ್ತದೆ.

3. ಶ್ರೀಲಕ್ಷ್ಮೀನಾರಾಯಣಾಚಾರ್ಯರು ಶ್ರೀರಾಘವೇಂದ್ರತೀರ್ಥರನ್ನು ಋಗರ್ಥಮಂಜರೀ ಕರ್ತೃತ್ವೇನ ಹಾಗೂ ಗುರುತ್ವೇನ ಸ್ತುತಿಸಿದ್ದಾರೆ. ಋಗ್ಭಾಷ್ಯಟೀಕಾವಾಕ್ಯಗಳಿಗೆ ಗುರುಗಳ ಅನುಗ್ರಹದಿಂದ ಭಾವವನ್ನು ಮಾತ್ರ ಹೇಳುತ್ತೇವೆಂದು ಪ್ರತಿಜ್ಞಾ ಮಾಡಿದ್ದಾರೆ.

ಹೆಜ್ಜೆ ಹೆಜ್ಜೆಗೂ ಅನೇಕ ವ್ಯಾಕರಣಸೂತ್ರಗಳನ್ನು, ವಾರ್ತಿಕಗಳನ್ನು ಉದಾಹರಿಸುತ್ತಾ ವ್ಯಾಖ್ಯಾನಿಸುವುದು ಈ ಟಿಪ್ಪಣಿಯ ವೈಶಿಷ್ಟ್ಯ.

ಸುಧಾ, ಚಂದ್ರಿಕಾ, ಸರ್ವಮೂಲಗ್ರಂಥಗಳು, ಋಗರ್ಥಮಂಜರೀ ಇತ್ಯಾದಿ ಗ್ರಂಥಗಳ ವಾಕ್ಯಗಳನ್ನು ಸಂವಾದಿಯಾಗಿ ಉದಾಹರಿಸಿ ವ್ಯಾಖ್ಯಾನಿಸುವುದು ಒಂದು ವೈಶಿಷ್ಟ್ಯ.

ವ್ಯಾಕರಣಮಹಾಭಾಷ್ಯಕ್ಕೆ ಈ ವ್ಯಾಖ್ಯಾನದಲ್ಲಿ ನೇರವಾಗಿ ವ್ಯಾಖ್ಯಾನಿಸುವುದೂ ಒಂದು ವೈಶಿಷ್ಟ್ಯ. ಅನೇಕ ಕೋಶವಾಕ್ಯಗಳನ್ನು ಉದಾಹರಿಸುವುದು, ಭಾಷ್ಯ ಮತ್ತು ಟೀಕಾ ವಾಕ್ಯಗಳ ಪಾಠಾಂತರಗಳನ್ನು ಸೂಚಿಸುವುದು.

ಋಙ್ಮಂತ್ರಗಳಿಗೆ ಹೆಚ್ಚಿನ ವ್ಯಾಖ್ಯಾನ ವಿಶೇಷವನ್ನು ಇತರ ಗ್ರಂಥಗಳ ಹೆಸರನ್ನು ಸೂಚಿಸುತ್ತಾ, ಅಲ್ಲಿ ನೋಡಿ ತಿಳಿದುಕೊಳ್ಳಬೇಕೆಂದು ಸೂಚಿಸುವುದು.

1) ಶ್ರೀರಾಮಚಾರಿತ್ರ್ಯಮಂಜರೀ
2) ಶ್ರೀಕೃಷ್ಣಚಾರಿತ್ರ್ಯಮಂಜರೀ
3) ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹಃ

**ವಾಚಾ ಸಂಕ್ಷಿಪ್ತಯಾ ಯದ್ಬಹುಚರಿತಮುಪಾವರ್ಣಯಸ್ತ್ವಂ ಮುರಾರೇಃ**
**ಕಿಂಚ ಶ್ರೀರಾಘವೇಂದ್ರವ್ರತಿಪರಘುಪತೇಸ್ತೇನ ನೋ ವಿಸ್ಮಯೋऽಹಮ್ ।**

**ಕಿಂ ವಾ ದುಸ್ಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ**
**ಪಶ್ಯಾಮಂದೋಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ॥**

ಶ್ರೀರಾಘವೇಂದ್ರಯತಿಶ್ರೇಷ್ಠರೇ! ಶ್ರೀರಾಮನ ಮತ್ತು ಶ್ರೀಕೃಷ್ಣನ ವಿಸ್ತಾರವಾದ ಅನೇಕ ಚರಿತ್ರೆಗಳನ್ನು ಅತಿಸಂಕ್ಷೇಪವಾಗಿ ನೀವು ಹೇಳಿರುವುದೇನಿದೆಯೋ ಆದರಿಂದ ನಾನು ಆಶ್ಚರ್ಯಗೊಳ್ಳುವುದಿಲ್ಲ. ಏಕೆಂದರೆ, ಮಹಾತ್ಮರಿಗೆ ಮೂರ್ಲೋಕಗಳಲ್ಲಿ ಅಸಾಧ್ಯವಾದುದು ಯಾವುದಿದೆ? ಕುಂಭಸಂಭವರಾದ ಅಗಸ್ತ್ಯ ಋಷಿಗಳು ಅಪಾರ-ವಾದ ಸಮುದ್ರವನ್ನು ತಮ್ಮ ಬೊಗಸೆಯಲ್ಲಿ ಹಿಡಿದು ಒಂದು ಜೇನಿನ ಹನಿಯಂತೆ ಆಪೋಶನ ಮಾಡಿದರಷ್ಟೆ?

ವ್ಯಾಖ್ಯಾನವನ್ನು ಮಾಡಿ ಒಂದು ಚಿಕ್ಕ ಗ್ರಂಥವನ್ನು ಬರೆದಿದ್ದೀರಿ. ಏಕೆಂದರೆ, ತಮ್ಮ ಪುತ್ರರಾದ ಲಕ್ಷ್ಮೀನಾರಾಯಣಾಚಾರ್ಯರು ಬರೆದ ಋಗ್ಭಾಷ್ಯಟೀಕಾಟಿಪ್ಪಣಿಯು ಬೇಗನೇ ಪಂಡಿತಮಂಡಳಿಯಲ್ಲಿ ಪ್ರಚಾರಕ್ಕೆ ಬರಲಿ ಎಂಬ ಸದುದ್ದೇಶ್ಯದಿಂದ ಇರಬಹುದು. ಇಂತಹ ನಿಮ್ಮ ಅನುಗ್ರಹಕ್ಕೆ ಪಾತ್ರರಾದ ಶ್ರೀಲಕ್ಷ್ಮೀನಾರಾಯಣಾ-ಚಾರ್ಯರೇ ಧನ್ಯರು ಎಂದು ಭಾವ.

ಇಲ್ಲಿ ಶ್ರೀರಾಘವೇಂದ್ರತೀರ್ಥರು ಸನ್ಯಸ್ತರಾದ ಮೇಲೆಯೂ ಮಗನ ಗ್ರಂಥವು ಲೋಕದಲ್ಲಿ ಪ್ರಸಿದ್ಧಿಗೆ ಬರಲಿ ಎಂದು ಬಯಸಿದ್ದು ಸರಿಯೇ ಎಂಬ ಪ್ರಶ್ನೆಯು ಸಹಜವಾಗಿ ಮೂಡುತ್ತದೆ. ಅದಕ್ಕೆ ಎರಡು ಬಗೆಯಾಗಿ ಉತ್ತರಿಸಬಹುದು.

1. ಶಾಸ್ತ್ರಪಾಂಡಿತ್ಯ ಯಾರಲ್ಲಿದ್ದರೂ ಸರಿ ಅದು ಪ್ರಚಾರಕ್ಕೆ ತರುವುದು ಎಲ್ಲರಿಗೂ ವಿಹಿತವಾದ ಧರ್ಮವೇ ಆಗಿದೆ. ಲೌಕಿಕವಾದ ಕೀರ್ತಿ ಮಗನಿಗೆ ಬರಲಿ ಎಂಬ ಉದ್ದೇಶ್ಯ ಮಾತ್ರವಿರಬಾರದು.

2. ಮಕ್ಕಳು ಏಳು ವಿಧವಾಗಿರುತ್ತಾರೆಂದು ಒಂದು ಸ್ಮೃತಿವಚನದಿಂದ ತಿಳಿಯುತ್ತದೆ.

**ವರಜೋ ವೀರ್ಯಜಶ್ಚೈವ ಕ್ಷೇತ್ರಜಃ ಪಾಲಕಸ್ತಥಾ ।**
**ವಿದ್ಯಾಮಂತ್ರಸುತೌ ಚೈವ ಗೃಹೀತಃ ಸಪ್ತಮಃ ಸುತಃ ॥**

ಏಳು ಪುತ್ರರಲ್ಲಿ ಶಾಂತಿಪುರಸ್ಸರವಾಗಿ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮ-ರಲ್ಲಿ ವಿದ್ಯಾಭ್ಯಾಸ ಮಾಡಿದ್ದರಿಂದ ವಿದ್ಯಾಪುತ್ರರಾಗಿಯೂ ಗುರುಗಳ ಮೂಲಕ ಮಂತ್ರೋಪದಿಷ್ಟರಾದ್ದರಿಂದ ಮಂತ್ರಪುತ್ರರಾಗಿಯೂ ಲಕ್ಷ್ಮೀನಾರಾಯಣಾಚಾರ್ಯರು ಪ್ರಸಿದ್ಧರಾಗಿದ್ದಾರೆಂದು ತಿಳಿಯಬೇಕು.

## ಋಗ್ಭಾಷ್ಯಟೀಕಾಟಿಪ್ಪಣೀ

1. ಒಂದು ಪದಕ್ಕೆ ಅನೇಕ ಅರ್ಥಗಳನ್ನು ಹೇಳುವುದು ಒಂದು ವಿಶೇಷ.
2. ತೃಚಶಬ್ದನಿಷ್ಪತ್ತಿಪ್ರಕಾರವನ್ನು – तिस्रः ऋचो यस्मिन् समुदाये स तृच इत्यर्थः ಎಂಬುದಾಗಿ ಹೇಳುತ್ತಾ, ಇದರ ವಿವರಣೆಯನ್ನು ''अग्नेयं यज्ञमध्वरं'' ಎಂಬ ಮಂತ್ರದ ವ್ಯಾಖ್ಯಾನದಲ್ಲಿ ಉಪಪಾದಿಸಿದ್ದೇವೆ. ಅದನ್ನು ಅಲ್ಲಿಯೇ ನೋಡಿ ತಿಳಿದುಕೊಳ್ಳಿ ಎಂದು ಬರೆದಿದ್ದಾರೆ. ಇದು ಶ್ರೀರಾಯರ ಶೈಲಿಯನ್ನು ಹೋಲುತ್ತದೆ.

3. ಶ್ರೀಲಕ್ಷ್ಮೀನಾರಾಯಣಾಚಾರ್ಯರು ಶ್ರೀರಾಘವೇಂದ್ರತೀರ್ಥರನ್ನು ಋಗರ್ಥಮಂಜರೀ ಕರ್ತೃತ್ವೇನ ಹಾಗೂ ಗುರುತ್ವೇನ ಸ್ತುತಿಸಿದ್ದಾರೆ. ಋಗ್ಭಾಷ್ಯಟೀಕಾವಾಕ್ಯಗಳಿಗೆ ಗುರುಗಳ ಅನುಗ್ರಹದಿಂದ ಭಾವವನ್ನು ಮಾತ್ರ ಹೇಳುತ್ತೇವೆಂದು ಪ್ರತಿಜ್ಞಾ ಮಾಡಿದ್ದಾರೆ.

ಹೆಜ್ಜೆ ಹೆಜ್ಜೆಗೂ ಅನೇಕ ವ್ಯಾಕರಣಸೂತ್ರಗಳನ್ನು, ವಾರ್ತಿಕಗಳನ್ನು ಉದಾಹರಿಸುತ್ತಾ ವ್ಯಾಖ್ಯಾನಿಸುವುದು ಈ ಟಿಪ್ಪಣಿಯ ವೈಶಿಷ್ಟ್ಯ.

ಸುಧಾ, ಚಂದ್ರಿಕಾ, ಸರ್ವಮೂಲಗ್ರಂಥಗಳು, ಋಗರ್ಥಮಂಜರೀ ಇತ್ಯಾದಿ ಗ್ರಂಥಗಳ ವಾಕ್ಯಗಳನ್ನು ಸಂವಾದಿಯಾಗಿ ಉದಾಹರಿಸಿ ವ್ಯಾಖ್ಯಾನಿಸುವುದು ಒಂದು ವೈಶಿಷ್ಟ್ಯ.

ವ್ಯಾಕರಣಮಹಾಭಾಷ್ಯಕ್ಕೆ ಈ ವ್ಯಾಖ್ಯಾನದಲ್ಲಿ ನೇರವಾಗಿ ವ್ಯಾಖ್ಯಾನಿಸುವುದೂ ಒಂದು ವೈಶಿಷ್ಟ್ಯ. ಅನೇಕ ಕೋಶವಾಕ್ಯಗಳನ್ನು ಉದಾಹರಿಸುವುದು, ಭಾಷ್ಯ ಮತ್ತು ಟೀಕಾ ವಾಕ್ಯಗಳ ಪಾಠಾಂತರಗಳನ್ನು ಸೂಚಿಸುವುದು.

ಋಜ್ಮಂತ್ರಗಳಿಗೆ ಹೆಚ್ಚಿನ ವ್ಯಾಖ್ಯಾನ ವಿಶೇಷವನ್ನು ಇತರ ಗ್ರಂಥಗಳ ಹೆಸರನ್ನು ಸೂಚಿಸುತ್ತಾ, ಅಲ್ಲಿ ನೋಡಿ ತಿಳಿದುಕೊಳ್ಳಬೇಕೆಂದು ಸೂಚಿಸುವುದು.

1) ಶ್ರೀರಾಮಚಾರಿತ್ರ್ಯಮಂಜರೀ
2) ಶ್ರೀಕೃಷ್ಣಚಾರಿತ್ರ್ಯಮಂಜರೀ
3) ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹಃ

**ವಾಚಾ ಸಂಕ್ಷಿಪ್ತಯಾ ಯದ್ಬಹುಚರಿತಮುಪಾವರ್ಣಯಸ್ತ್ವಂ ಮುರಾರೇಃ**
**ಕಿಂಚ ಶ್ರೀರಾಘವೇಂದ್ರವ್ರತಿಪರಘುಪತೇಸ್ತೇನ ನೋ ವಿಸ್ಮಯೋಽಹಮ್ ।**

**ಕಿಂ ವಾ ದುಸ್ಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ**
**ಪಶ್ಯಾಮಂದೋಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ॥**

ಶ್ರೀರಾಘವೇಂದ್ರಯತಿಶ್ರೇಷ್ಠರೇ! ಶ್ರೀರಾಮನ ಮತ್ತು ಶ್ರೀಕೃಷ್ಣನ ವಿಸ್ತಾರವಾದ ಅನೇಕ ಚರಿತ್ರೆಗಳನ್ನು ಅತಿಸಂಕ್ಷೇಪವಾಗಿ ನೀವು ಹೇಳಿರುವುದೇನಿದೆಯೋ ಅದರಿಂದ ನಾನು ಆಶ್ಚರ್ಯಗೊಳ್ಳುವುದಿಲ್ಲ. ಏಕೆಂದರೆ, ಮಹಾತ್ಮರಿಗೆ ಮೂರ್ಲೋಕಗಳಲ್ಲಿ ಅಸಾಧ್ಯವಾದುದು ಯಾವುದಿದೆ? ಕುಂಭಸಂಭವರಾದ ಅಗಸ್ತ್ಯ ಋಷಿಗಳು ಅಪಾರವಾದ ಸಮುದ್ರವನ್ನು ತಮ್ಮ ಬೊಗಸೆಯಲ್ಲಿ ಹಿಡಿದು ಒಂದು ಜೇನಿನ ಹನಿಯಂತೆ ಆಪೋಶನ ಮಾಡಿದರಷ್ಟೆ?

ವಿಸ್ತಾರವಾದ ವಿಷಯಗಳನ್ನು ಸಂಕ್ಷಿಪ್ತವಾಗಿ ಹೇಳುವುದು ಒಂದು ವಿಧವಾದ ಸ್ಪಷ್ಟೀಕರಣ ಎಂಬುದಾಗಿ ಶ್ರೀಮನ್ನ್ಯಾಯಸುಧೆಯಲ್ಲಿ ಹೇಳಿದಂತೆ ಶ್ರೀರಾಯರು ಮೂರು ಕಿರುಹೊತ್ತಿಗೆಗಳನ್ನು ರಚಿಸಿರುವರು.

**ಮುಹುಃ ಸ್ಮಾರಿತವಾಲ್ಮೀಕಿಂ ಪುನಸ್ತಂ ನೌಮಿ ದೇಶಿಕಮ್ ।**
**ಯೋ ವಿಸ್ತೀರ್ಣಾಂ ರಾಮಕಥಾಂ ಸ್ರಗ್ಧರಾಭಿಃ ಸಮಗ್ರಹೀತ್ ॥**

ಮೂಲರಾಮಾಯಣ, ತಾತ್ಪರ್ಯನಿರ್ಣಯದ ರಾಮಾಯಣ ಕಥಾ, ಸಂಗ್ರಹ ರಾಮಾಯಣ, ವಾಲ್ಮೀಕಿ ರಾಮಾಯಣ, ಇವುಗಳ ಕಥಾಭಾಗವನ್ನು ಸ್ರಗ್ಧರಾವೃತ್ತ-ಗಳಿಂದ ಕೂಡಿದ ಕೇವಲ 11 ಶ್ಲೋಕಗಳಲ್ಲಿ ಸಂಗ್ರಹಿಸಿ ಶ್ರೀರಾಮಚಾರಿತ್ರ್ಯಮಂಜರೀ-ಯನ್ನು ಶ್ರೀರಾಘವೇಂದ್ರತೀರ್ಥರು ರಚಿಸಿರುವರು.

ಅದರಂತೆ, ಶ್ರೀಮದ್ಭಾಗವತದ 10ನೇ ಸ್ಕಂಧದಲ್ಲಿ ಬರುವ ಶ್ರೀಕೃಷ್ಣನ ಸಮಗ್ರ ಚರಿತೆಯನ್ನು ಸ್ರಗ್ಧರಾವೃತ್ತಗಳಿಂದ ಕೂಡಿದ ಕೇವಲ 28 ಶ್ಲೋಕಗಳಿಂದ ಬಹು ಸುಂದರವಾಗಿ ನಿರೂಪಿಸುವ ಶ್ರೀಕೃಷ್ಣಚಾರಿತ್ರ್ಯಮಂಜರೀ ಎಂಬ ಸ್ತೋತ್ರರೂಪ ಕಾವ್ಯವನ್ನು ರಚಿಸಿರುವರು.

"ಶ್ರೀಮಾನ್ ವಿಷ್ಣುಃ ಪ್ರಜಾತಃ" ಎಂಬಲ್ಲಿ ಶ್ರೀರಾಮನಿಗೆ ಜನನವಿಲ್ಲವಾದ ಕಾರಣ ಶ್ರೀರಾಘವೇಂದ್ರತೀರ್ಥರು ಪ್ರಜಾತಃ ಎಂದರು. ಪ್ರಕರ್ಷೇಣ ಜಾತಃ ಅಂದರೆ ಪ್ರಾದುರ್ಭಾವ ಎಂಬ ಅರ್ಥವನ್ನು ಸೂಚಿಸಿದರು. ಇನ್ನೊಂದು ಶ್ಲೋಕದಲ್ಲಿ "ದಶವದನಹೃತಾಮಾಕೃತಿಂ ಭೂಮಿಜಾಯಾ ಅನ್ವಿಷ್ಯನ್" ರಾವಣನು ಅಪಹರಿಸಿದ ಸೀತೆಯ ಪ್ರತಿಕೃತಿಯನ್ನು (ಸೀತಾಕೃತಿ- ಯನ್ನು) ಹುಡುಕುತ್ತಾ ಶ್ರೀರಾಮಚಂದ್ರನು ಸಾಗಿದನು ಎಂಬ ತಾತ್ಪರ್ಯನಿರ್ಣಯದ ಸುಂದರ ಸೂಚನೆಯನ್ನು ನೀಡಿದ್ದಾರೆ.

ಶ್ರೀಲಕ್ಷ್ಮೀನಾರಾಯಣಾಚಾರ್ಯರ ವ್ಯಾಖ್ಯಾನದ ವೈಶಿಷ್ಟ್ಯವೆಂದರೆ - ಮೂಲ ಶ್ಲೋಕಗಳಲ್ಲಿ ಬರುವ ಪದಗಳಿಗೆ ಪರ್ಯಾಯ ಪದಗಳನ್ನು ಸೂಚಿಸುವ ಕೋಶಗಳನ್ನು ಸೂಚಿಸುವುದು, ವ್ಯಾಕರಣಾಂಶಗಳನ್ನು ವಿಶೇಷವಾಗಿ ಬರೆಯುವುದು, ಒಂದೊಂದು ಮೂಲಶ್ಲೋಕದಿಂದ ಎಲ್ಲಿಂದ ಎಲ್ಲಿಯವರೆಗೆ ಕಥಾಭಾಗ ಸೂಚಿತವಾಗಿದೆ ಎಂಬುದನ್ನು "ಇತ್ಯಾದಿ ಕಥಾಸೂಚಿತಾ" ಎನ್ನುವ ಮೂಲಕ ಸೂಚಿಸುವುದು, "ವ್ಯಪ್ತತೀರ್ಥಃ" ಎಂಬ ಪದಕ್ಕೆ ವ್ಯಪ್ತಂ = ಪಿತುರುದ್ದೇಶೇನ ದತ್ತಂ ತೀರ್ಥಂ = ಜಲಂ ಯೇನ (ಯಸ್ಯ) ಸಃ, ಪಿತೃತರ್ಪಣಾದಿಕಂ ಕೃತವಾನ್ ಪಿತೃತರ್ಪಣವನ್ನು ಕೊಟ್ಟನು ಇತ್ಯಾದಿ ಸ್ವಾರಸ್ಯವಾದ ಅರ್ಥವನ್ನು ಸೂಚಿಸುವುದು - ಇವೇ ಮೊದಲಾದದ್ದು.

ಶ್ರೀಕೃಷ್ಣಚಾರಿತ್ರ್ಯಮಂಜರಿಯ ಮೊದಲನೇ ಶ್ಲೋಕದಲ್ಲಿ ಭಗವಂತನಾದ ಶ್ರೀಕೃಷ್ಣನಿಗೆ ಜನನವಿಲ್ಲ ಎನ್ನುವುದನ್ನು ಸೂಚಿಸುವುದಕ್ಕಾಗಿ "ಪ್ರಾದುರಾಸೀತ್" = ಪ್ರಾದುರ್ಬಭೂವ ಎಂದರು ಶ್ರೀರಾಘವೇಂದ್ರತೀರ್ಥರು. "ಪೂತನಾಂ ಯೋ ಜಘಾನ" ಪೂತನಾಸಂಹಾರದ ಮೂಲಕ ಪೂತನೆಯಲ್ಲಿ ಆವೇಶಗೊಂಡ ತಾಟಕೆ-ಯನ್ನು ತಮಸ್ಸಿಗೆ ತಳ್ಳಿ ಊರ್ವಶಿಗೆ ಸ್ವರ್ಗವನ್ನು ಕರುಣಿಸಿದ ಎಂಬ ಅಂಶ ವ್ಯಾಖ್ಯಾನದಿಂದ ತಿಳಿಯುತ್ತದೆ.

ಆರನೇ ಶ್ಲೋಕದಲ್ಲಿ - ಗೋಪಿಕಾಸ್ತ್ರೀಯರು "ಶ್ರೀಕೃಷ್ಣನನ್ನೇ ಪತಿಯನ್ನಾಗಿ ಮಾಡು" ಎಂದು ಪಾರ್ವತಿಯನ್ನು ಪ್ರಾರ್ಥಿಸಿದ ನಂತರ ಯಮುನಾನದಿಯಲ್ಲಿ ಸ್ನಾನ ಮಾಡಿದ್ದು, ಶ್ರೀಕೃಷ್ಣನು ಅವರ ವಸ್ತ್ರಾಪಹಾರ ಮಾಡಿದ್ದು, ಅವರ ಪ್ರಾರ್ಥನಾನಂತರ ಅವರವರ ವಸ್ತ್ರಗಳನ್ನು ಕೊಟ್ಟದ್ದು, ಯಜ್ಞದಲ್ಲಿ ಗೋಪಾಲಕರಿಗೆ ಭೋಜನ ಮಾಡಿಸಿದ್ದು, ಗೋವರ್ಧನ ಪರ್ವತವನ್ನೆತ್ತಿ ಗೋವುಗಳನ್ನು ರಕ್ಷಿಸಿದ್ದು, ಇವೇ ಮೊದಲಾದ ಮನೋಹರ ಕಥೆಗಳ ಸಂಗ್ರಹ ಮತ್ತು ವ್ಯಾಖ್ಯಾನ ಒಂದೇ ಪದ್ಯದಲ್ಲಿ ಅಪೂರ್ವವಾಗಿದೆ.

ಶ್ರೀಮನ್ಮಹಾಭಾರತವನ್ನು ಸಾಕ್ಷಾತ್ ಭಗವಂತನ ಅವತಾರಿಗಳಾದ ಶ್ರೀವೇದ-ವ್ಯಾಸರು ರಚಿಸಿದ್ದಾರೆ. ಶ್ರೀಮನ್ಮಹಾಭಾರತಕ್ಕೆ ವಿಶಿಷ್ಟವಾದ ಸ್ಥಾನವಿದೆ. "ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್" ಮಹಾಭಾರತದಲ್ಲೇನಿದೆಯೋ ಅದೇ ಬೇರೆ ಕಡೆಗಿದೆ, ಇಲ್ಲಿ ಯಾವುದಿಲ್ಲವೋ ಅದು ಬೇರೆಲ್ಲಿಯೂ ಇಲ್ಲ ಎಂಬುದಾಗಿಯೂ ಮತ್ತು ನಾಲ್ಕು ವೇದಗಳಿಗಿಂತಲೂ ಉತ್ತಮವಾದ (ಮಹಾಭಾರತ) ಪಂಚಮ ವೇದವೆಂದು ಪ್ರಸಿದ್ಧವಾಗಿದೆ. ವೇದದಲ್ಲಿ ಹೇಳದೇ ಇರುವ ವಿಷಯಗಳನ್ನೂ ಮಹಾಭಾರತದಲ್ಲಿ ಸರ್ವಜ್ಞರಾದ ಶ್ರೀವೇದವ್ಯಾಸರು ಹೇಳಿದ್ದಾರೆ.

ಇಂತಹ ಶ್ರೀಮನ್ಮಹಾಭಾರತಕ್ಕೆ ಶ್ರೀಮದಾಚಾರ್ಯರು ಅಲ್ಲಲ್ಲಿ ಬರುವ ಸಂದೇಹಗಳಿಗೆ ಸರಿಯಾದ ಅರ್ಥಗಳನ್ನು ತಿಳಿಸುವುದಕ್ಕಾಗಿ ತಾತ್ಪರ್ಯನಿರ್ಣಯ-ವನ್ನು ರಚಿಸಿದ್ದಾರೆ. ಅದು 32 ಅಧ್ಯಾಯಗಳಿಂದ ಕೂಡಿದೆ.

ಇಂತಹ ಉತ್ತಮವಾದ 32 ಅಧ್ಯಾಯಗಳಿಂದ ಕೂಡಿದ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯಕ್ಕೆ ಒಂದೊಂದು ಅಧ್ಯಾಯಕ್ಕೆ ಒಂದೊಂದು ಶ್ಲೋಕದಂತೆ 32 ಶ್ಲೋಕಗಳಿಂದ ಕೂಡಿದ "ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹ" ಎಂಬ ಗ್ರಂಥವನ್ನು ರಚಿಸುವ ಮೂಲಕ ಸಕಲ ವಿಷಯಗಳನ್ನೂ ಸಂಗ್ರಹಮಾಡಿ ಬಹಳ

ಸ್ವಾರಸ್ಯವಾಗಿ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಸಜ್ಜನ ವೃಂದಕ್ಕೆ ಮಹದುಪಕಾರವನ್ನು ಮಾಡಿದ್ದಾರೆ.

ಇಂತಹ "ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹ" ಎಂಬ ಕೃತಿಗೆ ಸ್ವಾರಸ್ಯಕರವಾದ ವ್ಯಾಖ್ಯಾನವನ್ನು ರಚಿಸಿ ವಿದ್ವತ್ಪ್ರಪಂಚದಲ್ಲಿ ಅಸದೃಶ ಕೀರ್ತಿ-ಗೌರವ, ಸ್ಥಾನ-ಮಾನಗಳನ್ನು ಗಳಿಸಿದ, ವಿದ್ವತ್ಕುಲಲಲಾಮರಾದ ಪೂರ್ವಾಶ್ರಮ ಪುತ್ರರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ಮಹೋಪಕಾರ ಮಾಡಿದ್ದಾರೆ.

ಈ ಮೇಲ್ಕಂಡ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ ಮೂರು ಕೃತಿ-ಗಳಿಗೂ ಅವರ ಪೂರ್ವಾಶ್ರಮ ಪುತ್ರರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು "ಮಂಜರೀಮಾಲಾ"ಎಂಬ ಹೆಸರಿನಿಂದ ಅತ್ಯುತ್ತಮವಾದ ವ್ಯಾಖ್ಯಾನವನ್ನು ರಚಿಸಿರುವರು. ಇಂದು ಈ ಮೂರೂ ಕೃತಿಗಳ ಮೇಲೆ ಪಂಡಿತರು ನಿರರ್ಗಳವಾಗಿ ಪ್ರವಚನಮಾಡುತ್ತಾರೆಂದಾದರೆ ಅದು ಶ್ರೀಲಕ್ಷ್ಮೀನಾರಾಯಣಾಚಾರ್ಯರ ವ್ಯಾಖ್ಯಾನ-ದಿಂದಾಗಿಯೇ.

ಶ್ರೀರಾಮಚಾರಿತ್ರ್ಯಮಂಜರೀ ರಚನೆಯ ಮೂಲಕ ಮೂಲರಾಮಾಯಣಕ್ಕೂ ವಾಲ್ಮೀಕಿ ರಾಮಾಯಣಕ್ಕೂ, ತಾತ್ಪರ್ಯನಿರ್ಣಯ ರಾಮಾಯಣಕ್ಕೂ ಹಾಗೂ ಸಂಗ್ರಹರಾಮಾಯಣಕ್ಕೂ, ಶ್ರೀಕೃಷ್ಣಚಾರಿತ್ರ್ಯಮಂಜರೀ ರಚನೆಯ ಮೂಲಕ ಶ್ರೀಮದ್ಭಾಗವತ 10ನೇ ಸ್ಕಂಧಕ್ಕೂ ಹಾಗೂ ಹರಿವಂಶಕ್ಕೂ ಶ್ರೀಮನ್ಮಹಾಭಾರತಕ್ಕೂ ಹಾಗೂ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಕ್ಕೂ, ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯಭಾವಸಂಗ್ರಹ ರಚನೆಯ ಮೂಲಕ ಶ್ರೀರಾಘವೇಂದ್ರತೀರ್ಥರು ರಾಮಾಯಣ - ಭಾಗವತ - ಭಾರತ ಈ ಮೂರೂ ಗ್ರಂಥಗಳಿಗೂ ಒಂದರ್ಥದಲ್ಲಿ ವ್ಯಾಖ್ಯಾನಿಸಿದಂತೆ. ಅವರ ಪೂರ್ವಾಶ್ರಮ ಪುತ್ರರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ಈ ಮೂರೂ ಗ್ರಂಥಗಳಿಗೂ ವ್ಯಾಖ್ಯಾನವನ್ನು ರಚಿಸುವ ಮೂಲಕ ಪರಂಪರಯಾ ವ್ಯಾಖ್ಯಾನಿಸಿದಂತೆ.

ಶ್ರೀಲಕ್ಷ್ಮೀನಾರಾಯಣಾರ್ಯರ ಸಂಪುಟದಲ್ಲಿ ಶ್ರೀಮದಾಚಾರ್ಯರ ಋಗ್ಭಾಷ್ಯದ ಸಂಶೋಧನೆಯಲ್ಲಿ ಮೂರು ಪ್ರತಿಗಳನ್ನು ಉಪಯೋಗಿಸಿ ಋಗ್ಭಾಷ್ಯದ ಪಾಠಗಳನ್ನು ಶೋಧಿಸಿದ್ದೇವೆ.

## ಶ್ರೀಜಯತೀರ್ಥರ ಟೀಕಾ

ಋಗ್ಭಾಷ್ಯಕ್ಕೆ ಶ್ರೀಜಯತೀರ್ಥರ ಟೀಕೆಯನ್ನು ಶೋಧಿಸುವಾಗ ಮೂರು ಪ್ರತಿ-ಗಳನ್ನು ಉಪಯೋಗಿಸಲಾಗಿದೆ.

1. ಆಧ್ಯಾತ್ಮಿಕ ಕೇಂದ್ರ ಗ್ರಂಥಾಲಯದ ಪ್ರತಿ.
2. ಶ್ರೀರಾಘವೇಂದ್ರಸ್ವಾಮಿಗಳ ಪೂರ್ವಾಶ್ರಮ ವಂಶೀಕರಾದ ಶ್ರೀಪಾದಪುತ್ರರಾದ ಪಂಡಿತಕೇಸರಿ, ರಾಜಾ. ಗಿರಿಯಾಚಾರ್ಯರ ಗ್ರಂಥಾಲಯದ ಪ್ರತಿ.
3. ಅವರ ಸಂಗ್ರಹದಲ್ಲೇ ಇದ್ದ ವಿದ್ವಾನ್ ಆಚಾರ್ಯ ವೆಂಕೋಬಾಚಾರ್ಯರು ಪಾಠಪ್ರವಚನಕಾಲದಲ್ಲಿ ಶೋಧಿಸಿದ ಕುಂಭಕೋಣ ಪ್ರತಿ.

## ಶ್ರೀಲಕ್ಷ್ಮೀನಾರಾಯಣಾಚಾರ್ಯ ಟಿಪ್ಪಣಿ

ಇದನ್ನು ಶೋಧಿಸುವಾಗ ಮೂರು ಪ್ರತಿಗಳನ್ನು ಉಪಯೋಗಿಸಲಾಗಿದೆ.

1. ಶ್ರೀರಾಘವೇಂದ್ರಸ್ವಾಮಿಗಳವರ ಪೂರ್ವಾಶ್ರಮ ವಂಶೀಕರು ಶ್ರೀಪಾದಪುತ್ರರು, ಗುರುವಂಶಭೂಷಣರು, ವಿದ್ವಚ್ಚೂಡಾಮಣಿಗಳೂ ಆದ ರಾಜಾ. ಎಸ್. ಗುರುರಾಜಾಚಾರ್ಯರ ಪರಿಮಳ ಸಂಶೋಧನ ಮಂದಿರದ ಪ್ರತಿ.

   ಶ್ರೀರಾಮಚಾರಿತ್ರ್ಯಮಂಜರೀವ್ಯಾಖ್ಯಾ, ಶ್ರೀಕೃಷ್ಣಚಾರಿತ್ರ್ಯಮಂಜರೀವ್ಯಾಖ್ಯಾ, ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹವ್ಯಾಖ್ಯಾ, ಈ ಮೂರು ಮುದ್ರಿತ ಗ್ರಂಥಗಳನ್ನೂ ಶೋಧನೆಯಲ್ಲಿ ಉಪಯೋಗಿಸಲಾಗಿದೆ.
2. ಶ್ರೀರಾಘವೇಂದ್ರಸ್ವಾಮಿಗಳ ಪೂರ್ವಾಶ್ರಮ ವಂಶೀಕರಾದ ಶ್ರೀಪಾದಪುತ್ರರಾದ ಪಂಡಿತಕೇಸರಿ, ರಾಜಾ. ಗಿರಿಯಾಚಾರ್ಯರ ಗ್ರಂಥಾಲಯದ ಪ್ರತಿ.
3. ಆಧ್ಯಾತ್ಮಿಕ ಕೇಂದ್ರ ಗ್ರಂಥಾಲಯದ ಪ್ರತಿ.

ಶ್ರೀಲಕ್ಷ್ಮೀನಾರಾಯಣಾರ್ಯಸಂಪುಟವನ್ನು ಪರಮಪೂಜ್ಯ 108 ಶ್ರೀಶ್ರೀಸುಶಮೀಂದ್ರ ತೀರ್ಥಶ್ರೀಪಾದಂಗಳವರ ಆಜ್ಞೆಯ ಮೇರೆಗೆ ಸಂಶೋಧನ ಮಾಡಲಾಗಿದೆ. ಉತ್ತರಾಧಿಕಾರಿಗಳಾದ ಪರಮಪೂಜ್ಯ ಶ್ರೀಶ್ರೀಸುಯತೀಂದ್ರತೀರ್ಥರು ಈ ಗ್ರಂಥದ ಸಂಶೋಧನಾದಿಕಾರ್ಯಗಳಿಗೆ ವಿಶೇಷವಾಗಿ ಪ್ರೋತ್ಸಾಹಿಸಿ ಅನುಗ್ರಹಿಸಿದ್ದಾರೆ. ಇಂತಹ ಉಭಯ ಶ್ರೀಪಾದಂಗಳವರಿಗೂ ಭಕ್ತಿಪೂರ್ವಕ ಸಾಷ್ಟಾಂಗ ನಮನಗಳು. ನಮ್ಮ ವಿದ್ಯಾಗುರುಗಳಾದ ಪಂಡಿತಕೇಸರಿ ಶ್ರೀಪಾದಪುತ್ರ ರಾಜಾ. ಗಿರಿಯಾಚಾರ್ಯರು ಈ ಗ್ರಂಥ ಸಂಶೋಧನೆಯಲ್ಲಿ ವಿಶೇಷ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸಿ ಆಶೀರ್ವದಿಸಿದ್ದಾರೆ. ಅವರಿಗೂ ಭಕ್ತಿಪೂರ್ವಕ ನಮನಗಳು. ಶ್ರೀಗಳವರ ಆಪ್ತ ಕಾರ್ಯದರ್ಶಿಗಳಾದ ರಾಜಾ. ರಾಜಗೋಪಾಲಾಚಾರ್ಯರು ಈ ಸಂಶೋಧನಾದಿ

ಕಾರ್ಯಗಳಿಗೆ ವಿಶೇಷ ಪ್ರೋತ್ಸಾಹಿಸಿ, ಶ್ರೀಗಳವರ ಆಜ್ಞೆಯ ಮೇರೆಗೆ ಮುದ್ರಣಾದಿ ಕಾರ್ಯಗಳಿಗೆ, ಸಂಶೋಧನೆಗೆ ಅನುಕೂಲ ಮಾಡಿಕೊಟ್ಟಿದ್ದಾರೆ. ಅವರನ್ನು ಅಭಿನಂದಿಸುತ್ತೇವೆ.

ಸಂಶೋಧನಾಕಾರ್ಯದಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಮಿತ್ರರುಗಳನ್ನು ಸ್ಮರಿಸುತ್ತೇವೆ.

1. ವಿದ್ವಾನ್ ಎಸ್. ರಾಘವೇಂದ್ರಾಚಾರ್ಯರು
2. ವಿದ್ವಾನ್ ಅಕ್ಕಿ. ರಾಘವೇಂದ್ರಾಚಾರ್ಯರು
3. ವಿದ್ವಾನ್ ಪಿ. ಮಧುಸೂದನಾಚಾರ್ಯರು
4. ವಿದ್ವಾನ್ ಎಸ್.ಆರ್. ದ್ವಾರಕನಾಥಾಚಾರ್ಯರು

ಬಹಳ ಸುಂದರವಾಗಿ ಮುದ್ರಿಸಿದ ಸುಧಾ ಮುದ್ರಣಾಮಂದಿರದ ಮುದ್ರಕರಾದ ಶ್ರೀಧನಂಜಯ ವರಖೇಡಕರ್ ಅವರಿಗೆ ಧನ್ಯವಾದಗಳು.

ಎಂದಿನಂತೆ ನಮ್ಮ ಸಂಸ್ಥೆಯ ಗ್ರಂಥಗಳನ್ನು ಸ್ವೀಕರಿಸಿ, ಪಾಠ-ಪ್ರವಚನ-ಪಾರಾಯಣಾದಿಗಳನ್ನು ಮಾಡುವ ಸುಜನರಿಗೆ ಶ್ರೀಹರಿ-ವಾಯು-ಗುರುಗಳು ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಪ್ರಕೃತ ಋಗ್ಭಾಷ್ಯದ 13 ಸೂಕ್ತಗಳ 133 ಮಂತ್ರಗಳಿಗೆ ಮಾತ್ರ (ಟೀಕೆಗೆ) ಟಿಪ್ಪಣೀ ದೊರೆತಿದೆ. ಅದನ್ನು ಮಾತ್ರ ಮುದ್ರಿಸಲಾಗಿದೆ. ಮುಂದಿನ ಭಾಗ ದೊರೆತಲ್ಲಿ ಅದನ್ನೂ ಮುದ್ರಿಸಲಾಗುವುದು.

ಹೀಗೆ ಅನೇಕ ಗ್ರಂಥಗಳ ಸಂಶೋಧನಾದಿ ಕಾರ್ಯಗಳನ್ನು ನಮ್ಮಿಂದ ಮಾಡಿಸಲೆಂದು ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ-ಶ್ರೀಜಯತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲರಾಮಚಂದ್ರ ದೇವರ ಅಡಿದಾವರೆಗಳಲ್ಲಿ ಪ್ರಾರ್ಥಿಸುತ್ತೇವೆ.

11-08-2006 ಇತಿ
ಮಧ್ವಾರಾಧನಾ ವಿದ್ವಾನ್ ರಾಜಾ. ಪವಮಾನಾಚಾರ್ಯರು ಮತ್ತು ಇತರರು
ಮಂತ್ರಾಲಯ ಕ್ಷೇತ್ರ ಮಂತ್ರಾಲಯ

